ಮುದ್ದಣ ಕವಿಯ

# ಶ್ರೀರಾಮಪಟ್ಟಾಭಿಷೇಕಂ

ಸಂಪಾದಕ

**ಎಸ್. ವಿ. ಪರಮೇಶ್ವರಭಟ್ಟ**

ಪ್ರಕಾಶಕರು

ಉಷಾ ಸಾಹಿತ್ಯ ಮಾಲೆ

**ಮೈಸೂರು**

ಮಾಡಿರಬೇಕು. ಗದ್ದೆ ಹೊಲ ತೋಟ ಕೆರೆ ಕಟ್ಟೆ ಕಾಲುವೆ ಹೊಳೆ ಕಡಲು ಗುಡ್ಡ ಘಟ್ಟ ಬೆಟ್ಟ ಕಾಡು ಕಣಿವೆ—ಮುಂತಾದ ಪ್ರಕೃತಿಯ ನೋಟಗಳು ಕವಿಗೆ ವಿಸ್ಮಯಕಾರಕವಾಗಿ ಕಂಡಿರಬೇಕು. ಜೊತೆಗೆ ಆಗಿನ ದಿನಗಳಲ್ಲಿ ನಡೆಯುತ್ತಿದ್ದ ದೇವಸ್ಥಾನದ ಉತ್ಸವಗಳು, ನೆರೆಯ ಊರಿನ ಜಾತ್ರೆ, ಪರಿಷೆ, ರಥೋತ್ಸವಾದಿಗಳು, ಹರಿಕಥೆ, ಪುರಾಣಶ್ರವಣ, ಭಾಗವತಸಂಕೀರ್ತನೆ, ರಾಮಾಯಣಪಾರಾಯಣ ಮುಂತಾದವುಗಳು, ಉಗಾದಿ, ಗೌರಿ–ಗಣೇಶ, ನವರಾತ್ರಿ, ದೀಪಾವಳಿ, ಸಂಕ್ರಾಂತಿ ಮುಂತಾದ ದೊಡ್ಡ ದೊಡ್ಡ ಹಬ್ಬ ಹರಿದಿನ ಗಳು ಈ ಬಾಲಕನ ಹೃದಯವನ್ನು ಸೂರೆಗೊಂಡಿರಬೇಕು. 'ಈ ವಿಧವಾದ ಶಾಲೆಯ, ಸೃಷ್ಟಿಯ, ಸಂಸ್ಕೃತಿಯ ತ್ರಿಕೂಟಾಚಲದ ಮೇಲೇರಿ ಬಂದ ಜ್ಞಾನ ಭಾಸ್ಕರನ ಉದಯೋನ್ಮುಖ ಕಿರಣಗಳಿಂದ ತಾನೆ ಬಾಲಲಕ್ಷ್ಮೀನಾರಾಯಣನ ಸುಪ್ತಕವಿಹೃತ್ಪದ್ಮ ದಳದಳದಳದಳ ವಿಕಸಿಸುವುದಕ್ಕೆ ಆರಂಭಿಸಿರಬೇಕು.'೧

ಪ್ರಾಥಮಿಕ ಶಿಕ್ಷಣ ನಂದಳಿಕೆಯಲ್ಲಿ ನಡೆಯಿತು. ಮುಂದಿನ ಶಿಕ್ಷಣಕ್ಕಾಗಿ ಈ ಬಾಲಕ ಉಡುಪಿಗೆ ಹೋದನು. ಅಲ್ಲಿ ಇಂಗ್ಲಿಷ್ ಶಾಲೆಗೆ ಸೇರಿ ಒಂದೆರಡು ವರ್ಷ ಕಲಿತನು. ಆಮೇಲೆ ಬಡತನದ ದೆಸೆಯಿಂದ ಅದನ್ನು ಬಿಟ್ಟು ಟ್ರೈನಿಂಗ್ ಶಾಲೆಗೆ ಸೇರಿದನು. ವ್ಯವಹಾರಕ್ಕೆ ಬೇಕಾಗುವಷ್ಟು ಇಂಗ್ಲಿಷನ್ನು ಮನೆ ಯಲ್ಲಿಯೆ ಕಲಿಯತೊಡಗಿದನು. ಇದರ ಮೇಲೆ ಉಡುಪಿ ಪಟ್ಟಣದಲ್ಲಿ ನಡೆಯುತ್ತಿದ್ದ ಯಕ್ಷಗಾನ ಪ್ರಸಂಗಗಳಿಗೆ ಪದೇ ಪದೇ ಹೋಗುತ್ತಿದ್ದನು. ಶಾಸ್ತ್ರೀಯವಾದ ಸಂಗೀತವನ್ನು ಅಭ್ಯಾಸ ಮಾಡುವುದಕ್ಕೂ ಪ್ರಯತ್ನಪಟ್ಟನು. ಯಕ್ಷಗಾನದ ವೇಷ, ಹಾಡು, ಕುಣಿತ ಇವು ಈ ಹುಡುಗನ ಮೇಲೆ ಪ್ರಭಾವ ಬೀರಿದವು. ತಾನೂ ವೇಷ ಕಟ್ಟಿ ಕುಣಿದನು. ಹಾಡು ಕಟ್ಟಿ ಹಾಡಿದನು. ನಗೆ ನುಡಿಯ ಭೂಬಾಣಗಳನ್ನು ಬಿಟ್ಟನು. ಹೀಗೆ ಹತ್ತು ಹದಿಮೂರು ವರ್ಷ ಉಡುಪಿಯಲ್ಲಿ ಇದ್ದ ದಿನಗಳಲ್ಲಿ ಟ್ರೈನಿಂಗ್ ಕಾಲೇಜಿನಲ್ಲಿ ಉತ್ತೀರ್ಣ ನಾಗುವುದರ ಜೊತೆಗೆ ಯಕ್ಷಗಾನಗಳನ್ನು ರಚಿಸುವ ಸಾಮರ್ಥ್ಯವನ್ನೂ ಪಡೆದನು.

ಮುಂದೆ ಗಟ್ಟಿಮುಟ್ಟಾಗಿ ಕಂಡುಬಂದ ಈ ಹುಡುಗನನ್ನು ಟ್ರೈನಿಂಗ್ ಸ್ಕೂಲಿನ ಮುಖ್ಯೋಪಾಧ್ಯಾಯರು ಅಂಗಸಾಧನೆಯಲ್ಲಿ ಹೆಚ್ಚಿನ ಪರಿಶ್ರಮ

---

೧ ಇದೇ ಲೇಖಕನು ಸಂಪಾದಿಸಿರುವ 'ಅದ್ಭುತರಾಮಾಯಣ'ದ ಪೀಠಿಕೆ ನೋಡಿ.

ಗಳಿಸುವ ಸಲುವಾಗಿ ಮದರಾಸಿಗೆ ಕಳುಹಿಸಿಕೊಟ್ಟರು. ಮದರಾಸಿನಲ್ಲಿ ಈತ ಅಂಗಸಾಧನೆಯ ಜೊತೆಗೆ ತಮಿಳು ಮಲೆಯಾಳಿ ಭಾಷಾಸಾಹಿತ್ಯಗಳ ಪರಿಚಯ ವನ್ನೂ ಪಡೆದುಕೊಳ್ಳಲು ಪ್ರಯತ್ನಿಸಿದಂತೆ ತೋರುತ್ತದೆ. ಶ್ರೀ ಎಚ್. ನಾರಾಯಣರಾಯರು, ಶ್ರೀ ಬೆನಗಲ್ ರಾಮರಾಯರು ಮುಂತಾದವರ ಸಹಾಯದಿಂದ ದ್ರಾವಿಡ ಭಾಷೆಗಳಿಗೆ ಸಂಬಂಧಪಟ್ಟ ಅನೇಕ ಟಿಪ್ಪಣಿಗಳನ್ನು ರಚಿಸಿದ್ದನೆಂದು ಹೇಳುತ್ತಾರೆ. ಮದರಾಸಿನಿಂದ ಹಿಂದಿರುಗಿದ ಮೇಲೆ ಉಡು ಪಿಯ ಹೈಸ್ಕೂಲಿನಲ್ಲಿ ಲಕ್ಷ್ಮೀನಾರಾಯಣನಿಗೆ ವ್ಯಾಯಾಮ ಶಿಕ್ಷಕನ ಕೆಲಸ ದೊರೆಯಿತು. 'ಸಂಬಳ ತಿಂಗಳ ಮೂವತ್ತು ದಿನಗಳೂ ದುಡಿದರೆ ಹತ್ತು ರೂಪಾಯಿ!'

ಈ ಕವಿ ಅಂಗಸಾಧನೆಯ ಶಿಕ್ಷಕನಾಗಿ ಉಡುಪಿಯಲ್ಲಿ ನೆಲಸಿದ್ದು ೧೮೮೫ನೆಯ ಮೇ ತಿಂಗಳಲ್ಲಿ. ಈ ವೃತ್ತಿಯಲ್ಲಿ ಸು|| ಮೂರು ವರ್ಷಗಳ ಕಾಲ ಇಲ್ಲಿ ಇದ್ದನೆಂದು ತೋರುತ್ತದೆ. ಈ ಅವಧಿಯಲ್ಲಿ ಮಳಲಿ ಸುಬ್ಬರಾಯರೆಂಬ ಅದೇ ಶಾಲೆಯ ಉಪಾಧ್ಯಾಯರೊಬ್ಬರು ಇವನಿಗೆ ಗುರುವಾಗಿ ದೊರೆತರು. ಸುಬ್ಬರಾಯರೂ ಗ್ರಂಥಕರ್ತೃಗಳು. ಅವರು ತಾವು ರಚಿಸಿದ ಕೃತಿಗಳನ್ನೂ ತಮ್ಮ ಸ್ವಕೀಯ ಪುಸ್ತಕಭಂಡಾರದ ಗ್ರಂಥಗಳನ್ನೂ ಲಕ್ಷ್ಮೀನಾರಾಯಣನಿಗೆ ಓದಲು ಕೊಟ್ಟರು. ಲಕ್ಷ್ಮೀನಾರಾಯಣನು ಅನೇಕ ಯಕ್ಷಗಾನಗಳನ್ನು ಓದಿದನು. ತನಗೂ ಅಂತಹ ಕೃತಿಗಳನ್ನು ರಚಿಸುವ ಅಭಿಲಾಷೆಯುಂಟೆಂದು ಗುರುಗಳಲ್ಲಿ ಬಿನ್ನವಿಸಿಕೊಂಡನು. ಗುರುಗಳು ಸಂತೋಷದಿಂದ ಒಪ್ಪಿ ಸಂಸ್ಕೃತದ ರತ್ನಾವಳೀ ನಾಟಕದ ಕಥಾನಕವನ್ನು ಹೇಳಿ ಬರೆಯಿಸಿದರು. ಮಳಲಿ ಗುರುಗಳ ಕೃಪೆಯಿಂದ ಲಕ್ಷ್ಮೀನಾರಾಯಣ 'ರತ್ನಾವತೀ ಕಲ್ಯಾಣ' ಎಂಬ ತನ್ನ ಚೊಚ್ಚಲು ಕೃತಿಯನ್ನು ರಚಿಸಿ ಕವಿಯಾದನು.

ಮುಂದೆ 'ಕುಮಾರವಿಜಯ' ಎಂಬ ಇನ್ನೊಂದು ಯಕ್ಷಗಾನವನ್ನು ಬರೆದು ಸಂಸ್ಕೃತ ಅದ್ಭುತರಾಮಾಯಣವನ್ನು ಗುರುಗಳಲ್ಲಿ ಓದಿ ಅದನ್ನು ಹಳ ಗನ್ನಡದಲ್ಲಿ ಗದ್ಯದಲ್ಲಿ ಸ್ವತಂತ್ರವಾದ ಕೃತಿಯನ್ನಾಗಿ ರಚಿಸಲು ತೊಡಗಿದನು. ಈ ನಡುವೆ ಸಂಸ್ಕೃತ ಹಳಗನ್ನಡಗಳ ಕಾವ್ಯನಾಟಕಗಳನ್ನು ಅಭ್ಯಾಸ ಮಾಡಿ ದನು. ಸಾಹಿತ್ಯದ ಉಪಾಸನೆಯನ್ನು ಒಂದು ತಪಸ್ಸೆಂಬಂತೆ ಕೈಕೊಂಡನು.

ಮುಂದೆ ಮಳಲಿಯವರಿಗೆ ಕುಂದಾಪುರಕ್ಕೆ ವರ್ಗವಾದಾಗ ೧೮೮೭ನೆ

ಮಾರ್ಚಿಯಲ್ಲಿ ಲಕ್ಷ್ಮೀನಾರಾಯಣನೂ ಕಷ್ಟಪಟ್ಟು ಅದೇ ಊರಿಗೆ ವರ್ಗ ಮಾಡಿಸಿಕೊಂಡನು. ಕನ್ನಡ 'ಅದ್ಭುತರಾಮಾಯಣ'ವೆಂಬ ಗದ್ಯ ಕಾವ್ಯ ಈ ವೇಳೆಗೆ ಇಲ್ಲಿ ಪೂರ್ತಿಯಾಯಿತು. ೧೮೯೫ನೆ ಮಾರ್ಚಿ ೩ರಲ್ಲಿ ಲಕ್ಷ್ಮೀನಾರಾಯಣ ಅನ್ಯಕರ್ತೃಕವೆಂಬ ಸೋಗಿನಲ್ಲಿ ಈ ಕೃತಿಯನ್ನು ಮೈಸೂರಿನ ಕಾವ್ಯಮಂಜರಿ ಸಂಪಾದಕರಿಗೆ ಮುದ್ರಣಕ್ಕಾಗಿ ಕಳುಹಿಸಿಕೊಟ್ಟನು. ೧೮೯೫ನೆ ಜುಲೈ ತಿಂಗಳ ಸಂಚಿಕೆಯಲ್ಲಿ ಮುದ್ರಣ ಪ್ರಾರಂಭವಾಗಿ ಅಕ್ಟೋಬರ್ ತಿಂಗಳ ಸಂಚಿಕೆಯಲ್ಲಿ ಮುಕ್ತಾಯವಾಯಿತು.

ಈ ವೇಳೆಗೆ ಲಕ್ಷ್ಮೀನಾರಾಯಣನಿಗೆ ಬವುಲಾಡಿ ವೆಂಕಟರಮಣ ಹೆಬ್ಬಾರರು ಎನ್ನುವ ವಿದ್ವಾಂಸರೊಬ್ಬರ ಪರಿಚಯಲಾಭ ದೊರೆಯಿತು. ಈ ಮಹನೀಯರಲ್ಲಿ ಲಕ್ಷ್ಮೀನಾರಾಯಣನು ತಾನು ಕನ್ನಡ ಜೈಮಿನಿ ಭಾರತದ ಮಾದರಿಯಲ್ಲಿ ಬರೆಯಲು ತೊಡಗಿದ್ದ 'ರಾಮಾಶ್ವಮೇಧ' ಎಂಬ ದೊಡ್ಡ ಗ್ರಂಥದ ಮೊದಮೊದಲಿನ ಕೆಲವು ಪದ್ಯಗಳನ್ನು ಓದಿ ಹೇಳಿದನಂತೆ. ಹೆಬ್ಬಾರರು ಪದ್ಯಬಂಧದಲ್ಲಿ ಕಾಣಬರುವ ರಸಹೀನತೆಯನ್ನು ತೋರಿಸಿಕೊಟ್ಟು ಪ್ರಾಚೀನ ಗ್ರಂಥಗಳಲ್ಲಿ ದೊರೆಯುವ ಶಬ್ದರೂಪಗಳಿಗೆ ಆಧಾರಗಳನ್ನು ಕೇಳುತ್ತ ಬಂದರಂತೆ. ಮೂರು ನಾಲ್ಕು ವರ್ಷಗಳು ಕಳೆದ ಮೇಲೆ ಮತ್ತೊಮ್ಮೆ ಲಕ್ಷ್ಮೀನಾರಾಯಣ ಹೆಬ್ಬಾರರನ್ನು ಸಂಧಿಸಿದಾಗ ಅವರಿಗೆ ಆ ರಾಮಾಶ್ವ ಮೇಧದ ಇನ್ನು ಕೆಲವು ಪದ್ಯಗಳನ್ನು ಓದಿದನಂತೆ. ಆಗ ಅವರು ಖಡಾಖಡಿ ಯಾಗಿ 'ನೀವು ಹೀಗೆ ಬರೆಯುವುದಕ್ಕಿಂತ ಛಂದಸ್ಸಿನ ಗೊಡವೆ ಬಿಟ್ಟು ವಚನ ರೂಪದಲ್ಲಿಯೆ ಏಕೆ ಬರೆಯಬಾರದು' ಎಂದು ಕೇಳಿದರಂತೆ. ಮತ್ತೆ ಮೂರು ವರ್ಷಗಳ ಮೇಲೆ ಇನ್ನೊಮ್ಮೆ ಸಂಧಿಸಿದಾಗ ಲಕ್ಷ್ಮೀನಾರಾಯಣನು ತನ್ನ ಅಚ್ಚಾದ ಅದ್ಭುತರಾಮಾಯಣದ ಪ್ರತಿಯೊಂದನ್ನು ಹೆಬ್ಬಾರರಿಗೆ ಕೊಟ್ಟಾಗ ಅವರು ಓದಿನೋಡಿ ಸಂತೋಷ ಪಟ್ಟರಂತೆ. ಇನ್ನೊಮ್ಮೆ ಸಂಧಿಸಿದಾಗ ರಾಮಪಟ್ಟಾಭಿಷೇಕ ಮುಗಿಯಿತೆಂದೂ ಮುಂದಿನ ಭಾಗವನ್ನು ಗದ್ಯದಲ್ಲಿ ಬರೆಯುವೆನೆಂದೂ ಈ ಕವಿ ಹೆಬ್ಬಾರರಿಗೆ ಹೇಳಿದನಂತೆ. ಅಲ್ಲದೆ ಪಟ್ಟಾಭಿಷೇಕ ಕಾಲದಲ್ಲಿ ರಾಮನ ಸ್ತುತಿಪರವಾದ ಕೆಲವು ಪದ್ಯಗಳನ್ನು ಹೆಬ್ಬಾರರೆ ಮಾಡಿ ಕೊಡಬೇಕೆಂದು ಕೇಳಿಕೊಂಡನಂತೆ. ಅದಕ್ಕೆ ಒಪ್ಪಿ ಹೆಬ್ಬಾರರು 'ಭೂರಮೆ ಭುಜಾಗ್ರದೊಳ್ ಭುಜಮಧ್ಯದೋಳ್' ಎಂಬ ಪದ್ಯವನ್ನಾರಂಭಿಸಿ 'ಇಂತುಚಿತ

ಮೃದುಮಧುರವಚನರಚನೆಗಳಂ' ಎಂಬ ಪದ್ಯದವರೆಗೆ ನಡುವಣ ೩೩ ಪದ್ಯಗಳನ್ನು ಬರೆದು ಕೊಟ್ಟರಂತೆ. ಅಲ್ಲದೆ ಒಟ್ಟಿನಲ್ಲಿ ಕಾವ್ಯವನ್ನು ಒಮ್ಮೆ ಕೈಯಾಡಿಪರಂತೆ. ಹೀಗೆ ಹೆಬ್ಬಾರರ ಸಲಹೆ ಸಹಕಾರಗಳಿಂದ ಲಕ್ಷ್ಮೀನಾರಾಯಣ 'ಶ್ರೀರಾಮಪಟ್ಟಾಭಿಷೇಕ'ವನ್ನು ಪೂರ್ತಿಮಾಡಿದನು ೨೫-೯-೧೮೯೫ರಲ್ಲಿ 'ಮಹಾಲಕ್ಷ್ಮೀಯೆಂಬಾಕೆಯಿಂದ ರಚಿತವಾದ ರಾಮಪಟ್ಟಾಭಿಷೇಕವೆಂಬ ಷಟ್ಪದೀಗ್ರಂಥವು ಸಿಕ್ಕಿದೆ. ಅದರಲ್ಲಿ ಪದ್ಯಗಳು ೨೫೦ರೊಳಗಿವೆ. ಗ್ರಂಥವು ಬಹಳ ಚೆನ್ನಾಗಿದೆ. ಮುದ್ರಿಸಲು ಯೋಗ್ಯವೆಂದು ಭಾವಿಸುತ್ತೇನೆ....' ಎಂದು ಕಾವ್ಯಮಂಜರಿಯವರಿಗೆ ಬರೆದನು. ೧೮೯೫ನೆಯ ನವಂಬರ್ ೪೪ನೆಯ ಸಂಚಿಕೆಯಲ್ಲಿ ಎಂದರೆ ಅದ್ಭುತರಾಮಾಯಣವನ್ನು ಮುಗಿಸಿದ ಮರು ಸಂಚಿಕೆಯಲ್ಲಿಯೆ ರಾಮಪಟ್ಟಾಭಿಷೇಕವನ್ನು ಆರಂಭಮಾಡಿ ೧೮೯೬ನೆಯ ಜನವರಿ ೪೬ನೆಯ ಸಂಚಿಕೆಯಲ್ಲಿ ಮುಗಿಸಿದರು.

ರಾಮಪಟ್ಟಾಭಿಷೇಕ ಕಾವ್ಯದಲ್ಲಿ ನಾಂದಿ ಸಂಧಿಯಲ್ಲಿ ಬರುವ ಪ್ರತಿ ಪದ್ಯದ ಮೊದಲನೆಯ ಅಕ್ಷರವನ್ನು ಕ್ರಮವಾಗಿ ಜೋಡಿಸುತ್ತ ಹೋದರೆ 'ಶ್ರೀರಾಮಚಂದ್ರಾಯ ನಮಾಮಿ' ಎಂದಾಗುತ್ತದೆ. ಈ ಗೂಢರಚನೆಯ ಸ್ವಾರಸ್ಯವನ್ನು ಈತನೇ ಹೆಬ್ಬಾರರಿಗೆ ತೋರಿಸಿ ಕೊಟ್ಟಿದ್ದನಂತೆ. 'ಮಹಾಲಕ್ಷ್ಮಿ' ಕಾವ್ಯಕರ್ತೃವೆಂದಿದ್ದುದನ್ನು ನೋಡಿ ಹೆಬ್ಬಾರರು 'ನನ್ನ ತಾಯಿ ಹೆಸರೂ ಮಹಾಲಕ್ಷ್ಮಿ, ಅದನ್ನೇ ಹಾಕಿದ್ದೀರಾ' ಎಂದು ಪರಿಹಾಸ ಮಾಡಿದ್ದರಂತೆ. 'ರಾಮಾಶ್ವಮೇಧ' ಎಂದು ಪ್ರಾರಂಭವಾದ ಕೃತಿ ಹೀಗೆ 'ರಾಮಪಟ್ಟಾಭಿಷೇಕ' ಕಾವ್ಯವಾಗಿ ಬೇರ್ಪಟ್ಟಾಗ ಅದಕ್ಕೆ ಅನುಗುಣವಾಗಿ ಅಲ್ಲಲ್ಲಿ ಪದಗಳ ಬದಲಾವಣೆ ಆಗಬೇಕಾಯಿತು. 'ಶ್ರೀಕಾಂತನಧ್ವರದಚಾರಿತ್ರ್ಯಮಂ' ಎನ್ನುವ ಕಡೆ ಬದಲಾವಣೆಯಾಗದಿದ್ದುದನ್ನು ಹೆಬ್ಬಾರರು ತೋರಿಸಿ ಕೊಟ್ಟು 'ಅಭ್ಯುದಯಚಾರಿತ್ರ್ಯಮಂ' ಎಂದು ತಿದ್ದಿದರಂತೆ. ಮುದ್ದಣ ಈ ತಿದ್ದುಪಡಿಗೆ ಒಪ್ಪಿಕೊಂಡನಂತೆ. ಮುಂದೆ ಲಕ್ಷ್ಮೀನಾರಾಯಣನಿಗೆ ಮತ್ತೆ ಉಡುಪಿಗೆ ವರ್ಗವಾದುದರ ಪರಿಣಾಮವಾಗಿ ಹೆಬ್ಬಾರರ ಸಂಪರ್ಕ ಬರುಬರುತ್ತ ಕಡಿಮೆಯಾಗಿ ಕಡೆಗೊಮ್ಮೆ ಕಡಿದೇ ಹೋಯಿತೆಂದು ತೋರುತ್ತದೆ.

'ಪದ್ಯಂ ವಧ್ಯಂ, ಗದ್ಯಂ ಹೃದ್ಯಂ; ಹೃದ್ಯಮಪ್ಪ ಗದ್ಯದೊಳೆ ಪೇೞ್ವುದು' ಎಂದು ಮುಂದೆ ಕವಿ ನಿರ್ಧರಿಸಿದನು. ಹೆಬ್ಬಾರರ ಪ್ರೇರಣೆಯಿಂದ ಈ ನಿರ್ಧಾರಕ್ಕೆ

ಬಂದು ಅದರಂತೆ ರಾಮಪಟ್ಟಾಭಿಷೇಕದ ಮುಂದಣ ಕಥೆಯನ್ನು ಗದ್ಯದಲ್ಲಿ ಬರೆಯುತ್ತಾನೆ. ಜೈಮಿನಿಭಾರತದ ಹೃದ್ಯವಾದ ಸೀತಾಪರಿತ್ಯಾಗದ ಕಥೆಯನ್ನು ರಾಮನ ಅಶ್ವಮೇಧ ವೃತ್ತಾಂತವನ್ನು ಸುಂದರವಾಗಿ ಗದ್ಯದಲ್ಲಿ ಹೇಳಿದನು. ವೆಂಕಟಾಚಾರ್ಯರ ಕಾದಂಬರಿಯನ್ನು ಈತ ಓದಿದ್ದನೋ ಏನೊ! ಆ ಕಾದಂಬರೀ ಕಥೆಯ ಸಂವಾದ ಸ್ವಾರಸ್ಯವನ್ನು ಗ್ರಹಿಸಿ ಮುದ್ದಣ-ಮನೋರಮೆಯರ ಅಪೂರ್ವವಾದ ಸರಸ ಸಲ್ಲಾಪವನ್ನು ಕಥೆಯಲ್ಲಿ ಬಳಸಿಕೊಂಡು ಕಥೆ ಹೇಳಿದನು. ಎಡೆಎಡೆಯಲ್ಲಿ ಸಕ್ಕದದ ನಲ್ನುಡಿ ಮೆರೆಯಲು ತಿರುಳ್ಗನ್ನಡದಲ್ಲಿ ಈ ಕಥೆ ಬರೆದನು. ಈ ಗ್ರಂಥವೂ ಮೈಸೂರಿನ ಕಾವ್ಯಕಲಾನಿಧಿಯವರಿಂದ ೧೯೦೧ರಲ್ಲಿ ಬೆಳಕಿಗೆ ಬಂದಿತು. ಮುದ್ದಣ-ಮನೋರಮೆಯರ ಸಂವಾದ ವಾಕ್ಯಗಳು ಜನಪ್ರಿಯವಾದವು. ಎಲ್ಲ ಪತ್ರಿಕೆಗಳೂ ಕೃತಿಯನ್ನೂ ಕರ್ತೃವನ್ನೂ ಹೊಗಳಿದವು. ಕೆಲವು ಇಂಗ್ಲಿಷ್ ಪತ್ರಿಕೆಗಳೂ ಈ ಕವಿಯ ಕೃತಿಯನ್ನು ಕೊಂಡಾಡಿದವು.

ಲಕ್ಷ್ಮೀನಾರಾಯಣನ ಸಾಹಿತ್ಯ ಸಂಬಂಧವಾದ ಜೀವನ ಚರಿತ್ರೆಯ ಈ ಘಟ್ಟದಲ್ಲಿ ಅವನ ಕುಟುಂಬಜೀವನಕ್ಕೆ ಸಂಬಂಧಪಟ್ಟ ಕೆಲವು ಸಂಗತಿಗಳನ್ನು ನೆನೆಯಬಹುದು. ೧೮೯೩ರಲ್ಲಿ ತನ್ನ ಇಪ್ಪತ್ತೈದನೆಯ ವಯಸ್ಸಿನಲ್ಲಿ ಈ ಕವಿ ಮದುವೆಯಾದನು. ಈತನ ಹೆಂಡತಿಯ ಹೆಸರು ಕಮಲಾಬಾಯಿ ಎಂದು. ಮೈಸೂರು ಸೀಮೆಯ ಶಿವಮೊಗ್ಗ ಜಿಲ್ಲೆಯ ಕಾಗೇಗೋಡುಮಗ್ಗಿ ಇವಳ ತೌರು. ಈಕೆಯ ತಂದೆ ನಾರಣಪ್ಪಯ್ಯ ಎನ್ನುವವರು. ಅದ್ಭುತ ರಾಮಾಯಣ, ರಾಮಪಟ್ಟಾಭಿಷೇಕ, ರಾಮಾಶ್ವಮೇಧಗಳನ್ನು ಬರೆಯುವ ಕಾಲಕ್ಕೆ ಕವಿ ಮದುವೆಯಾಗಿ ದಾಂಪತ್ಯಜೀವನ ಸುಖವನ್ನು ಅನುಭವಿಸುತ್ತಿದ್ದನು. ರಾಮಾಶ್ವಮೇಧದಲ್ಲಿ ಬರುವ ಮುದ್ದಣ-ಮನೋರಮೆಯರ ಸಂವಾದ ಭಾಗ ರಸಿಕ ಲಕ್ಷ್ಮೀನಾರಾಯಣನ ಸರಸ ಸಂಸಾರ ಚಿತ್ರದ ಒಂದು ಮುಖ ಎನ್ನಬಹುದು. ಈತನಿಗೆ ಮೂವತ್ತು ವರುಷವಾದಾಗ (೧೮೯೮ರಲ್ಲಿ) ಒಬ್ಬ ಮಗನು ಹುಟ್ಟಿದನು. ಈತನಿಗೆ ರಾಧಾಕೃಷ್ಣನೆಂದು[೧] ಹೆಸರಿಟ್ಟರು.

ಈ ಕವಿಯ ಸಾಹಿತ್ಯ ಸಂಬಂಧವಾದ ಚಟುವಟಿಕೆಯನ್ನು ಶ್ರೀ ಪಂಜೆ ಮಂಗೇಶರಾಯರು, ಶ್ರೀ ಬೆನಗಲ್ ರಾಮರಾಯರು ಮುಂತಾದವರು ಪ್ರತ್ಯಕ್ಷ

---

೧ ಇವರು ಶಿವಮೊಗ್ಗ ಜಿಲ್ಲೆಯಲ್ಲಿ ಉಪಾಧ್ಯಾಯ ವೃತ್ತಿಯಲ್ಲಿದ್ದಾರೆ.

ವಾಗಿಯೂ ಪರೋಕ್ಷವಾಗಿಯೂ ಪ್ರಭಾವವನ್ನು ಬೀರಿರುವುದು ಕಂಡು ಬರುತ್ತದೆ.೧

ಅವಿಶ್ರಾಂತವಾದ ಮಾನಸಿಕ ಪರಿಶ್ರಮದಿಂದಲೂ ದಿನನಿತ್ಯದ ದಾರಿದ್ರ್ಯದ ಕಷ್ಟಕೋಟಲೆಗಳಿಂದಲೂ ಬಳಲಿ ಬೆಂಡಾದ ಲಕ್ಷ್ಮೀನಾರಾಯಣ ಕವಿ ಕ್ರಮೇಣ ರೋಗಗ್ರಸ್ತನಾಗಿ ಹಾಸಿಗೆ ಹಿಡಿದನು. ಕ್ಷಯರೋಗಕ್ಕೆ ತುತ್ತಾಗಿ ಕೆಲಕಾಲ ನರಳಿ ಕೊನೆಗೆ ಲಕ್ಷ್ಮೀನಾರಾಯಣ ೧೯೦೧ನೆ ಫೆಬ್ರುವರಿ ೧೫ನೆಯ (ಶಾರ್ವರಿ ಸಂ॥ದ ಮಾಘ ಬಹುಳ ೧೨) ಶುಕ್ರವಾರ ತನ್ನ ಮೂವತ್ತೊಂದನೆಯ ವರ್ಷ ಕಳೆದ ಕೆಲವೇ ದಿನಗಳಲ್ಲಿ ಅಕಾಲಮೃತ್ಯುವಿಗೆ ತುತ್ತಾಗಿ ಪರಂಧಾಮವನ್ನೈದಿದನು.

ಈ ಕವಿ ಬರೆಯಬೇಕೆಂದು ಸಂಕಲ್ಪ ಮಾಡಿದ ಕೃತಿಗಳ ವ್ಯಾಪ್ತಿ ಬಹು ದೊಡ್ಡದು. ಭಟ್ಟಾಕಳಂಕನ ಶಬ್ದಾನುಶಾಸನದ ಮಾದರಿಯಲ್ಲಿ ಕನ್ನಡದಲ್ಲಿ ಒಂದು ವ್ಯಾಕರಣವನ್ನು ಬರೆಯಬೇಕೆಂದಿದ್ದನು. ಕನ್ನಡದಲ್ಲಿ ನಿಘಂಟು ಕೋಶವೊಂದನ್ನು ರಚಿಸಬೇಕೆಂದಿದ್ದನು 'ಗೋದಾವರಿ' ಎಂಬ ಕಾದಂಬರಿಯನ್ನು ಕೆಲವು ಪರಿಚ್ಛೇದಗಳು ಬರೆದು ಮುಗಿದಿದ್ದವು. ಭಗವದ್ಗೀತೆಯನ್ನು ಭಾಮಿನಿಯಲ್ಲಿಯೂ ಕರ್ಣಾಟಕ ರಾಮಾಯಣವನ್ನು ವಾರ್ಧಕದಲ್ಲಿಯೂ ಬರೆದು ಮುಗಿಸಿದ್ದನಂತೆ. ಜೋಗುಳ ಎಂಬ ಭಾಷಾಶಾಸ್ತ್ರ ಸಂಬಂಧವಾದ ಪ್ರಬಂಧ ಆಗಲೇ ಬರೆದು ಅಚ್ಚಾಗಿತ್ತು. ಕಾಮಶಾಸ್ತ್ರವೊಂದನ್ನು ಕೂಡ ಬರೆಯುವ ಅಭಿಲಾಷೆ ಇತ್ತಂತೆ. ಕುಶವಿಜಯ ಎಂಬ ಇನ್ನೊಂದು ಗ್ರಂಥವನ್ನು ರಚಿಸುವ ಇಚ್ಛೆ ಇತ್ತಂತೆ. ತೊರವೆ ರಾಮಾಯಣದ ಕೆಲವು ಪದ್ಯಗಳಿಗೆ ಟಿಪ್ಪಣಿ ಬರೆದು ಇಟ್ಟಿದ್ದನಂತೆ.

'ಈತನ ನಿಲವು ಸುಮಾರು ಐದಡಿ ನಾಲ್ಕು ಅಂಗುಲ, ರೂಪ ಸುಂದರ, ಮುದ್ರೆ ಗಂಭೀರ, ಕಣ್ಣು ಚಂಚಲ, ಮೂಗು ಸ್ವಲ್ಪ ಉದ್ದ, ನಡಿಗೆ ಸ್ವಲ್ಪ ದಿಟ್ಟ, ಮಾತುಗಾರಿಕೆ ಬೇಕಾದಷ್ಟು, ಬುದ್ಧಿ ಶಾನೆ ಚುರುಕು' ಎಂದು ಹೇಳುತ್ತಾರೆ.

ಮೇಲೆ ಕಾಣಿಸಿದ ಕೆಲವು ವಿವರಗಳಿಂದ ಈ ಮುದ್ದಣ ಕವಿಯ ವ್ಯಕ್ತಿ ಮಹಿಮೆಯ ವಿಷಯವಾಗಿ ಇಷ್ಟು ಹೇಳಬಹುದು : ಈತ ಅಭ್ಯಾಸನಿರತನೂ

---

೧ ಈ ವಿಷಯವನ್ನು ಸ್ವಲ್ಪ ವಿವರವಾಗಿ ತಿಳಿಯ ಬಯಸುವವರು ಅದ್ಭುತ ರಾಮಾಯಣದಲ್ಲಿ ಬರೆದ ಪೀಠಿಕೆಯನ್ನು ನೋಡಬಹುದು.

ಸಂಪ್ರದಾಯಶರಣನೂ ಆದ ಪಂಡಿತನೂ ಹೌದು, ನೂತನ ಮಾರ್ಗಾನ್ವೇಷಿಯೂ ರಸಿಕವರೇಣ್ಯನೂ ಆದ ಕವಿಯೂ ಹೌದು. ಈತನಲ್ಲಿ ಕವಿಸಹಜವಾದ ಹೃದಯವೂ ಇದೆ, ಶಿಕ್ಷಕಸಹಜವಾದ ಬುದ್ಧಿಯೂ ಇದೆ. ಮನೋಧರ್ಮದಲ್ಲಿ ಕವಿ, ವೃತ್ತಿಯಲ್ಲಿ ವ್ಯಾಯಾಮ ಶಿಕ್ಷಕ. ಬಡವನಾಗಿ ಹುಟ್ಟಿ ಬಡವನಾಗಿ ಬೆಳೆದು ಬಡವನಾಗಿ ಅಳಿದನು. ತಿಂಗಳಿಗೆ ೧೦-೧೫-೨೦ ರೂಪಾಯಿ ವೇತನದಲ್ಲಿ ಬಾಳಿದ ಬಡಜೀವಿಯ ಪ್ರತಿಭೆ ಎಷ್ಟು ಶ್ರೀಮಂತವಾದದ್ದು! ಈ ಮಹನೀಯ ದೀರ್ಘಕಾಲ ಸುಖ ಸಂತೋಷದಿಂದ ಬದುಕದೆ ಹೋದದ್ದು ಎಂತಹ ದೌರ್ಭಾಗ್ಯ! 'ಓವೋ! ಕಾಲಪುರುಷಂಗೆ ಗುಣಮುಣಮಿಲ್ಲಂ ಗಡ!'

## ಕೃತಿಪರಿಚಯ

### ೧

'ಶ್ರೀರಾಮಪಟ್ಟಾಭಿಷೇಕಂ' ಎಂಬ ಕವನದ ಈ ಕೃತಿ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ ಒಟ್ಟು ಐದು ಸಂಧಿಗಳೂ ಇನ್ನೂರು ನಲವತ್ತೆರಡು ಪದ್ಯಗಳೂ ಇವೆ. ಮೊದಲನೆಯ ಸಂಧಿಯನ್ನು ನಾಂದೀ ಸಂಧಿ ಎಂದು ಕರೆಯಲಾಗಿದೆ. ಕವಿ ತನ್ನ ಇಷ್ಟದೇವತೆಗಳನ್ನು ಕುರಿತು ಸ್ತುತಿಸಿದ ಒಂಬತ್ತು ಪದ್ಯಗಳು ಇಲ್ಲಿವೆ. ಶ್ರೀರಾಮ, ಆದಿಶೇಷ, ಮಹಾವಿಷ್ಣು, ಸೀತಾಮಾತೆ, ವಿನಾಯಕ, ಸರಸ್ವತೀದೇವಿ, ಹನುಮಂತ ಮುಂತಾದ ದೇವತೆಗಳನ್ನು ಕವಿ ಸ್ತೋತ್ರಗೈದಿದ್ದಾನೆ. ಶ್ಲೇಷಾಲಂಕಾರವನ್ನು ಬಳಸಿಕೊಂಡಿರುವುದರಿಂದ, ಮಹೇಶ್ವರ, ಕೈಲಾಸಪರ್ವತ, ಪಾರ್ವತಿ, ಗರುಡ, ಚತುರ್ಮುಖಬ್ರಹ್ಮ, ಷಣ್ಮುಖಸ್ವಾಮಿ ಮುಂತಾದ ದೇವತೆಗಳ ಸ್ತೋತ್ರಗಳೂ ಇಲ್ಲಿ ಅಡಕವಾಗಿವೆ.

ಪೀಠಿಕಾಸಂಧಿಯಲ್ಲಿ ಹನ್ನೊಂದು ಪದ್ಯಗಳಿವೆ. ಮೊದಲನೆಯ ಪದ್ಯದಲ್ಲಿ ವಿಷ್ಣು, ಉಮಾಮಹೇಶ್ವರ, ಬ್ರಹ್ಮ, ರಾಮಲಕ್ಷ್ಮಣ, ಸುಗ್ರೀವಾದಿಗಳು, ಹನುಮಂತಾದಿ ವಾನರರು, ಗುರುಗಳು, ಕವಿಗಳು, ವಿದ್ವಾಂಸರು---ಇವರುಗಳನ್ನು ಕವಿ ಸ್ತೋತ್ರಗೈದಿದ್ದಾನೆ. ಅರ್ಥಸಮಯಮಕವೆಂಬ ಶಬ್ದಾಲಂಕಾರವನ್ನು ಬಳಸಿಕೊಂಡಿರುವುದರಿಂದ ಸೂರ್ಯ, ಚಂದ್ರ, ಕುಜ ಮುಂತಾದ ನವಗ್ರಹಗಳನ್ನೂ ಸ್ತೋತ್ರಗೈದಂತೆ ಆಗಿದೆ. ಮುಂದಿನ ಪದ್ಯದಲ್ಲಿ ಕವಿಯ ವಿನಯವೂ

ಗುರುಭಕ್ತಿಯೂ ಪ್ರಕಟಗೊಂಡಿವೆ. ಆ ಮುಂದಿನ ಪದ್ಯದಲ್ಲಿ ವ್ಯಾಸ, ವಾಲ್ಮೀಕಿ, ಜೈಮಿನಿ, ಪಿಂಗಳ, ಭವಭೂತಿ, ಶೂದ್ರಕ, ಕಾಳಿದಾಸ ಮತ್ತು ಬಾಣ ಈ ಸಂಸ್ಕೃತ ಕವಿಗಳನ್ನು ಸ್ಮರಿಸಿ ಚಂದ್ರಭಟ್ಟ, ಕೇಶವ, ನಂದಿ, ವಾಸುದೇವ, ಅಚ್ಯುತ, ಷಡಕ್ಷರಿ, ದಿಗಂಬರವಿಲಾಸ, ರುದ್ರಭಟ್ಟ, ವೇಂಕಟ ಮತ್ತು ಕೃಷ್ಣ ಈ ಕನ್ನಡ ಕವಿಗಳನ್ನೂ ಕವಿ ಸ್ಮರಿಸಿದ್ದಾನೆ.

ಬಳಿಕ 'ಕವಿತಾಸುಲಕ್ಷಣಗಳ ಗುಟ್ಟನರಿಯದೆ ಕಷ್ಟಸಾಧ್ಯವಹ ಕೃತಿಗೆ ಮನಗೊಟ್ಟೆಳು' ಎಂದು ತನ್ನನ್ನು ನಗೆಗೀಡುಮಾಡಬಾರದೆಂದು ಕವಿ ತನ್ನ ತಾಯಿ ಮಹಾಲಕ್ಷ್ಮಿಯ ಹೆಸರಿನಲ್ಲಿ—ಅನ್ಯಕರ್ತೃಕತ್ವದ ಸೋಗಿನಲ್ಲಿ—ಪ್ರಾರ್ಥಿಸಿಕೊಂಡಿದ್ದಾನೆ.

ವ್ಯಾಸ, ವಾಲ್ಮೀಕಿ, ಕಾಳಿದಾಸರ ಕೃತಿಗಳನ್ನು ಓದಿದ ಮಾತ್ರಕ್ಕೆ 'ಸುಪಾಂಡಿತ್ಯ' ಬರುತ್ತದೆಯೇ ಎಂದು ಕೇಳಿ 'ಅನ್ಯ ಪ್ರಬಂಧಗಳ ಹಂಬಲಜುಯೆಸು. ದೈವಮಲ್ಲದೆನಗಿಲ್ಲ ದಿವ್ಯಜ್ಞಾನ ಸದ್ಬೋಧಕಂ' ಎಂದು ವಿನಯವನ್ನೂ ದೈವಭಕ್ತಿಯನ್ನೂ ತೋರಿಕೊಂಡಿದ್ದಾನೆ.

ಮುಂದಿನ ಪದ್ಯದಲ್ಲಿ 'ನಿಂದಿಸುವ ಜನರ ದುರ್ವಾಕ್ಯಮಂ ಕೇಳ್ದು ಮನಗುಂದಿ ಮಾಣ್ಬನೆ ಕಾವ್ಯರಚನೆಯಂ ಕವಿ' ಎಂದು ಕೇಳಿ 'ಗುಮ್ಮನಂದದಿನ ನೇಸರಂ ಕಂಡು ದನಿಗುಡಲರ್ಗನೇಂ ಕಿರಣಮುಡಗಿಸುವನೇ' ಎಂಬ ದೃಷ್ಟಾಂತವನ್ನು ಕೊಟ್ಟು ತನ್ನ ನಿಲವನ್ನು ಸಮರ್ಥಿಸಿಕೊಂಡಿದ್ದಾನೆ. ಕಾವ್ಯಶೋಭಾಕರಗಳಾದ ಧರ್ಮಗಳು ಇಲ್ಲದೆ ಹೋದರೂ 'ರಾಮನಾಮಾಮೃತದ ಬಿಂದಿಗೆ'ಯಂತಿರುವ ಈ ಕಾವ್ಯವನ್ನು ಸುಮ್ಮಸುಮ್ಮನೆ ದೂಷಿಸುವ ದೂಷಕನು ದೋಷಕ್ಕೆ ಭಾಗಿಯಾಗುತ್ತಾನೆ ಎಂದು ಕವಿ ಹೇಳಿದ್ದಾನೆ. ಮುಂದೆ ಕನ್ನಡ ನುಡಿಯಲ್ಲಿ ರಚಿಸಿದ ತನ್ನ ಕಾವ್ಯವನ್ನು ಕವಿ ಗುಣವತಿಯಾದ ಸ್ತ್ರೀಯಂತೆ ಉತ್ಪ್ರೇಕ್ಷಿಸಿ ತನ್ನ ಕೃತಿಯನ್ನು ಕೊಂಡಾಡಿಕೊಂಡಿರುವುದು ಕಾಣಬರುತ್ತದೆ.

'ಕನ್ನಡದಲ್ಲಿ ಬರೆದಿದ್ದೇನೆ, ಆದರೂ ಈ ಕಾವ್ಯ ಅಂಗೀಕಾರಾರ್ಹವಾದದ್ದು. ಭಕ್ತಿವೈರಾಗ್ಯಭರಿತವಾದ ಸತ್ಕಥೆಗಳಿದ್ದರೆ ಯಾವ ಭಾಷೆಯಾದರೆ ಏನು? ಚೆನ್ನ ಮರುಳನಾದರೆ ಏನು ಚೆನ್ನನಾಗನೆ' ಎಂದು ಘುಂತಾಗಿ ಹೇಳಿ ತನ್ನ ನಿಲವನ್ನು ಇನ್ನೊಂದು ದೃಷ್ಟಿಯಿಂದ ಸಮರ್ಥಿಸಿಕೊಂಡು ಕವಿ ಮುಂದುವರಿದಿದ್ದಾನೆ.

ಮುಂದಿನ ಪದ್ಯದಲ್ಲಿ ಶ್ಲೇಷಾಲಂಕಾರವನ್ನು ಬಳಸಿ ಕಾವ್ಯವನ್ನು ವಿರಚಿಸುವ ಕವಿಗೂ ಹಣದ ಲೇವಾದೇವಿಯನ್ನು ಇಟ್ಟುಕೊಂಡಿರುವ ವರ್ತಕನಿಗೂ ಸಾಮ್ಯವನ್ನು ಕಲ್ಪಿಸಿರುವುದು ಕಾಣಬರುತ್ತದೆ.

ಬಕ, ಕಪಿ, ಆಡು, ಇಲಿ, ಇರುವೆ, ನಾಯಿ, ಹಂಸ, ಹುಲಿ, ಕೋಗಿಲೆ, ಚಿತ್ರಗಾರ, ಹುಚ್ಚ, ವಿದೂಷಕ ಮತ್ತು ವರ್ತಕರಲ್ಲಿ ಕಾಣಬರುವ ಒಂದೊಂದು ಲಕ್ಷಣಗಳನ್ನು ಅಳವಡಿಸಿಕೊಂಡಿರುವ ಕವಿಯೇ ಅಕಳಂಕ ಕೀರ್ತಿಗೆ ಭಾಜನನಾಗುತ್ತಾನೆ ಎಂದು ಹೇಳಿದ್ದಾನೆ.

ಬುಧರು ಈ ಕೃತಿಯನ್ನು ತಿದ್ದಲಿ, ಕಥಾಸುಧೆಯನ್ನು ಭಕ್ತವೃಂದವು ಈಂಟಲಿ, ಅಭಿಮಾನಿಗಳು ಮನ್ನಿಸಲಿ, ಅಧಿನಾಥರು ಆಶ್ರಯವನ್ನೀಯಲಿ, ನವಮಧುರ ರಸಝರಿಯನ್ನು ರಸಿಕರು ಶೋಧಿಸುತ್ತಿರಲಿ, ಉಡುಪಿಯ ಕೃಷ್ಣನು ಕಬ್ಬಿಗರ ಕುಲವನ್ನು ಯಾವಾಗಲೂ ಕಾಪಾಡುತ್ತಿರಲಿ ಎಂದು ಕವಿ ಆಶಿಸಿದ್ದಾನೆ.

ಹೀಗೆ ಈ ಪೀಠಿಕಾಸಂಧಿಯಲ್ಲಿ ತನ್ನ ಮತ್ತು ತನ್ನ ಕೃತಿಯ ವಿಷಯವಾಗಿ ಪರಿಚಯಾತ್ಮಕವಾದ ಮಾತುಗಳನ್ನು ಕವಿ ಆಡಿದ್ದಾನೆ.

ಮೂರನೆಯ ಸಂಧಿಯಲ್ಲಿ ಅರವತ್ತು ಪದ್ಯಗಳಿವೆ. ಶೇಷನ ಬಳಿಗೆ ವಾತ್ಸ್ಯಾಯನನು ಬಂದು 'ರಘುವರನ ಮೂರ್ಧಾಭಿಷೇಚನ ಸಮಸ್ತ ಚಾರಿತ್ರಮುಂ ಪೇಳ್ದು' ತನ್ನನ್ನು ಕಾಪಾಡಬೇಕೆಂದು ಕೇಳಿಕೊಳ್ಳುತ್ತಾನೆ. ನಾಗೇಂದ್ರನು ಸಂತೋಷದಿಂದ ಒಪ್ಪಿ ಇದಕ್ಕೆ ಉಪಚಾರವೇಕೆ ಎಂದು ಹೇಳುತ್ತಾ ರಾಮಚಾರಿತ್ರದ ಮಹಿಮೆಯನ್ನು ಬಗೆಬಗೆಯಾಗಿ ಕೊಂಡಾಡಿ ಸಾವಿರ ನಾಲಗೆಯ ನನಗೂ ಶ್ರೀಲೋಲನ ಚಾರಿತ್ರ್ಯವನ್ನು ಹೇಳುವುದು ಕಷ್ಟಸಾಧ್ಯ ಎಂದು ರಾವಣವಧಾನಂತರದಲ್ಲಿ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟವನ್ನು ಕಟ್ಟಿದ ಶ್ರೀರಾಮನು ಹನುಮಂತನನ್ನು ಮುಂದೆ ಕಳುಹಿಸಿ ಸೀತೆ ಲಕ್ಷ್ಮಣ ಮತ್ತು ಸುಗ್ರೀವಾದಿಗಳೊಡನೆ ಪುಷ್ಪಕವಿಮಾನವನ್ನು ಏರಿ ಅಯೋಧ್ಯಾಭಿಮುಖಿಯಾಗಿ ಪ್ರಯಾಣ ಮಾಡಿದನು ಎಂಬ ಕಥೆಯನ್ನು ಆರಂಭಿಸುತ್ತಾನೆ. ಪುಷ್ಪಕವಿಮಾನ ವರ್ಣನೆಯ ಒಂದು ಪದ್ಯವಾದ ಬಳಿಕ ಮೇಲೆ ಹೋಗುವವರಿಗೆ ಕೆಳಗಡೆಯಲ್ಲಿರುವ ದಕ್ಷಿಣಸಮುದ್ರ ಹೇಗೆ ಕಾಣಿಸಿತು ಎಂಬುದನ್ನು ಕವಿ ಬಗೆಬಗೆಯಾಗಿ ವರ್ಣಿಸಿದ್ದಾನೆ. ಇಪ್ಪತ್ತು ಪದ್ಯಗಳಲ್ಲಿ

ತುಂಬಿಕೊಂಡಿರುವ ಈ ವರ್ಣನೆ ಕವಿಯ ಪಾಂಡಿತ್ಯ, ಕಲ್ಪನೆ, ಚಮತ್ಕಾರಗಳಿಗೆ ನಿಕಷಪ್ರಾಯವಾಗಿದೆ.

ಸಮುದ್ರವನ್ನು ದಾಟಿ ವಿಮಾನದ ಮೇಲೆ ಹಾರಿಬರುತ್ತಿರುವಾಗ ಕೆಳಗೆ ಕಾಣಿಸಿದ ಸರಸಿನದನದೀವಿಪಿನಗಳನ್ನು ರಾಮನು ತೋರಿಸುತ್ತ ತನ್ನ ಸೀತೆಗೆ ವರ್ಣಿಸಿದನೆಂಬ ವಿವರವನ್ನು ಮುಂಪೆ ಕವಿ ಹತ್ತು ಪದ್ಯಗಳಲ್ಲಿ ವರ್ಣಿಸಿದ್ದಾನೆ. ಈ ಸಂದರ್ಭದಲ್ಲಿ ರಾಮಾಯಣದಲ್ಲಿ ಬರುವ ಅರಣ್ಯಕಾಂಡ ಕಿಷ್ಕಿಂಧಾಕಾಂಡಗಳ ಮುಖ್ಯಮುಖ್ಯವಾದ ಘಟನೆಗಳನ್ನು ಕವಿ ನೆನೆದಿದ್ದಾನೆ. ಹಿಂದೆ ನಡೆದ ಘಟನೆಗಳ ಒಂದು ತೆರನಾದ ವಿಹಂಗಮಾವಲೋಕನ ನಮಗೆ ಇಲ್ಲಿ ದೊರೆಯುತ್ತದೆ. ಸಂಪಾತಿಯ ಆಶ್ರಮ, ಸ್ವಯಂಪ್ರಭೆಯ ಗುಹೆ, ಸುಗ್ರೀವನ ರಾಜಧಾನಿ, ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾಗ ಜಟಾಯುವಿನೊಡನೆ ನಡೆದ ಯುದ್ಧದ ಸ್ಥಳ, ಪಂಚವಟಿ, ಶೂರ್ಪನಖಿ ತನ್ನನ್ನು ಕಾಡಿದ ಸ್ಥಳ, ಮಾರೀಚಮೃಗ ಸುಳಿದ ಸ್ಥಳ, ಚಿತ್ರಕೂಟ, ಯಮುನಾ ನದೀ ತೀರ, ಭಾರದ್ವಾಜಾಶ್ರಮ—ಹೀಗೆ ಒಂದಾದ ಮೇಲೆ ಒಂದರಂತೆ ದೃಗ್ಗೋಚರವಾದ ಸನ್ನಿವೇಶಗಳನ್ನು ಶ್ರೀರಾಮನು ಸೀತಾದೇವಿಗೆ ತೋರಿಸುತ್ತ ಹಿಂದೆ ನಡೆದುದನ್ನು ನೆನಪಿಗೆ ತಂದುಕೊಳ್ಳುತ್ತ ಇರುವಲ್ಲಿ ಪುಷ್ಪಕ ಅಯೋಧ್ಯೆಯನ್ನು ಸಮೀಪಿಸುತ್ತದೆ.

ಇತ್ತ ಶ್ರೀರಾಮನು ಈ ಮೊದಲೆ ಕಳುಹಿದ ಹನುಮಂತನು ಬಂದು ಕಾಣಲಿದ್ದ ಭರತನ ಮನಸ್ಸಿನ ಆ ಹೊತ್ತಿನ ಕಾತರವನ್ನು ಚಿತ್ರಿಸುವ ಸಲುವಾಗಿ ಕವಿ ಹತ್ತೊಂಬತ್ತು ಪದ್ಯಗಳನ್ನು ಬರೆದಿದ್ದಾನೆ. ಭರತನ ಕಳವಳದ ತೀವ್ರತೆ ಏನು ಎನ್ನುವುದನ್ನು ಕವಿ ವಿವರವಾಗಿ ಬಣ್ಣಿಸಿಕೊಂಡು ಹೋಗಿದ್ದಾನೆ. ಮಾನವ ಹೃದಯದ ವ್ಯಾಪಾರವನ್ನು ಚಿತ್ರಿಸುವ ದಕ್ಷತೆ ಈ ಕವಿಗೆ ಸಾಕಷ್ಟಿದೆ ಎನ್ನುವುದಕ್ಕೆ ಈ ಭಾಗ ಸಾಕ್ಷಿಯಾಗಿದೆ. ಭಗವಂತನ ಸಾಕ್ಷಾತ್ಕಾರಕ್ಕಾಗಿ ಅಹರ್ನಿಶಿಯೂ ನೋಂತಿರುವ ಭಕ್ತಹೃದಯದ ಕಾವು ನೋವುಗಳನ್ನು ಈ ಕವಿ ವರ್ಣಿಸಿರುವ ರೀತಿ ಮೆಚ್ಚತಕ್ಕದ್ದಾಗಿದೆ. ಆಂಜನೇಯನ ಆಶ್ವಾಸನ ರಾಮಾಗಮನದ ಶುಭವಾರ್ತೆಗಳನ್ನು ಮತ್ತೆ ಎರಡು ಪದ್ಯಗಳಲ್ಲಿ ಹೇಳಿ ಈ ಕವಿ ಸಂಧಿಯನ್ನು ಮುಗಿಸಿದ್ದಾನೆ. ಈ ಸಂಧಿಯಲ್ಲಿ ಮುಖ್ಯವಾಗಿ ಮೂರು ಸಂಗತಿಗಳಿಗೆ ಮುದ್ದಣ ತನ್ನ ಪ್ರತಿಭೆಯನ್ನು ಮೀಸಲಿರಿಸಿದ್ದಾನೆ. ೧. ಸಮುದ್ರ ವರ್ಣನೆ

(೨೦ ಪದ್ಯಗಳು), ೨. ಶ್ರೀರಾಮನು ಸೀತೆಗೆ ಆಕಾಶ ಮಾರ್ಗದಿಂದ ತೋರಿಸಿ ಹೇಳುವ ಕೆಳಗಣ ನದನದಿಗಳ ಕಾಡುಮೇಡುಗಳ ಆಶ್ರಮಗಳ ವರ್ಣನೆ (೧೦ ಪದ್ಯಗಳು), ೩. ಭರತನ ತಳಮಳದ ವರ್ಣನೆ (೧೯ ಪದ್ಯಗಳು).

ನಾಲ್ಕನೆಯ ಸಂಧಿ ಸಂಪೂರ್ಣವಾಗಿ ಮಾನವಸ್ವಭಾವದ ವರ್ಣನೆಗೆ ಮೀಸಲಾಗಿದೆ. ಮೊದಲ ಆರು ಪದ್ಯಗಳಲ್ಲಿ ಭರತ ಹನುಮಂತರ ಸಂಭಾಷಣೆ ಇದೆ. ಮುಂದಿನ ಹದಿನೆಂಟು ಪದ್ಯಗಳಲ್ಲಿ ಪುರಜನರ—ಹೆಂಗಸರ, ಗಂಡಸರ, ಮಕ್ಕಳ—ಸಡಗರ ಸಂಭ್ರಮಗಳನ್ನು ಕವಿ ಸ್ವಾರಸ್ಯವಾಗಿ ಚಿತ್ರಿಸಿದ್ದಾನೆ. ರಾಮ ಮತ್ತು ರಾಮಾನುಜರ ದರ್ಶನದಿಂದ ಉಂಟಾದ ಅನ್ಯೋನ್ಯ ಪ್ರೇಮ ಮತ್ತು ಆನಂದದ ವರ್ಣನೆಗೆ ಮುಂದಿನ ಹದಿನೈದು ಪದ್ಯಗಳು ಮೀಸಲಾಗಿವೆ. ಅಣ್ಣ ತಮ್ಮಂದಿರು ಹೇಗಿರಬೇಕು ಹೇಗಿರಬಾರದು ಎನ್ನುವುದನ್ನು ಹೇಳಿದ ಲೋಕ ನೀತಿ ಆ ಮುಂದಣ ಏಳು ಪದ್ಯಗಳಲ್ಲಿ ಕಾಣಬರುತ್ತದೆ. ಮತ್ತೆ ಪುರಪ್ರವೇಶಕ್ಕೂ ಪುರವನ್ನು ಶೃಂಗರಿಸಿದ ಬಗೆ, ಪೌರರ ಹರ್ಷೋದ್ಗಾರ, ಶ್ರೀರಾಮನಿಗೆ ಪುರ ಜನರಿತ್ತ ಸಂಭ್ರಮದ ಸ್ವಾಗತ ಇವುಗಳ ವಿವರಪೂರ್ಣವಾದ ಚಿತ್ರ ಮುಂದಿನ ಹದಿನೇಳು ಪದ್ಯಗಳಲ್ಲಿ ಬರುತ್ತದೆ. ಈ ಸಂಧಿಯಲ್ಲಿಯೂ ಕವಿ ಮುಖ್ಯವಾಗಿ ಮೂರು ವಿಷಯಗಳನ್ನು ಕುರಿತಿದ್ದಾನೆ. ಪೌರರ ಸಡಗರ ಸಂಭ್ರಮಗಳ ವರ್ಣನೆ, ರಾಮ, ರಾಮಾನುಜರ ಸಮಾಗಮದ ವರ್ಣನೆ, ಪುರಪ್ರವೇಶದ ವರ್ಣನೆ. ಈ ವರ್ಣನೆಗಳಲ್ಲಿ ಭಕ್ತಿಯ ಬಗೆಬಗೆಯ ಅಭಿವ್ಯಕ್ತಿಯನ್ನು ನಾವು ಕಾಣುತ್ತೇವೆ.

ಐದನೆಯ ಸಂಧಿಯಲ್ಲಿ ಇದೇ ಸ್ವಾರಸ್ಯವಾದ ಮಾನವನ ಹೃದಯದ ಬೇರೊಂದು ರೀತಿಯ ವರ್ಣನೆಯನ್ನು ನಾವು ಕಾಣುತ್ತೇವೆ. ರಾಮನಿಗಾಗಿ ರಾಮಮಾತೆ ತಳವಳಗೊಂಡು ಕಾತರದಿಂದ ಕಾಯುತ್ತಿರುವ ಒಂದು ಚಿತ್ರವನ್ನು ಕವಿ ಮೊದಲ ನಾಲ್ಕು ಪದ್ಯಗಳಲ್ಲಿ ಕೊಟ್ಟಿದ್ದಾನೆ. ಮುಂದೆ ಎಂಟು ಪದ್ಯ ಗಳಲ್ಲಿ ಕೈಕೆ ಮತ್ತು ರಾಮ ಇವರ ಸಮಾಗಮದ ಚಿತ್ರವೂ ಅದರ ಮುಂದಣ ಆರು ಪದ್ಯಗಳಲ್ಲಿ ಸುಮಿತ್ರೆ ಮತ್ತು ರಾಮ ಇವರ ಸಮಾಗಮದ ಚಿತ್ರವೂ ಆ ಮುಂದಣ ಹನ್ನೊಂದು ಪದ್ಯಗಳಲ್ಲಿ ಕೌಸಲ್ಯೆ ಮತ್ತು ರಾಮ ಇವರ ಸಮಾಗ ಮದ ಚಿತ್ರವೂ ಬಂದಿದೆ. ಈ ಎಲ್ಲ ಸಂದರ್ಭದಲ್ಲಿಯೂ ರಾಮನ ಮಾತೃ ಭಕ್ತಿಯೂ ರಾಮಜನನಿಯರ ಪುತ್ರವಾತ್ಸಲ್ಯವೂ ಬಹಳ ಸುಂದರವಾಗಿ

ಮತ್ತು ಸಹಜವಾಗಿ ಚಿತ್ರಿತವಾಗಿರುವುದನ್ನು ನಾವು ಕಾಣುತ್ತೇವೆ. ಕೈಕೆಯ ಹೃದಯದಲ್ಲಿ ಮೂಡಿದ ಪಶ್ಚಾತ್ತಾಪ, ಸುಮಿತ್ರೆಯ ರಾಮಪರವಾದ ಅವ್ಯಾಜ ಪ್ರೇಮ, ರಾಮನ ನೆರಳಿನಲ್ಲಿರುವ ತನ್ನ ಮಗ ಲಕ್ಷ್ಮಣನ ವಿಷಯದಲ್ಲಿ ತಾನು ನಿಶ್ಚಿಂತಳಾಗಿರುವ ರೀತಿ, ಪುತ್ರಸಂದರ್ಶನದಿಂದ ಒಗೆದ ಕೌಸಲ್ಯೆಯ ಸುಖದ ಸುಮ್ಮಾನ, ರಾಮನ ವಿನಯ, ಸವಿನುಡಿಯ ಸೊಗಸು, ನಿರಹಂಕಾರ ಸ್ವಭಾವ, ಮಾತೃಭಕ್ತಿ—ಈ ಮುಂತಾದುವುಗಳನ್ನೆಲ್ಲ ಕವಿ ತುಂಬ ಸೊಗಸಾಗಿ ಮನ ಮುಟ್ಟುವ ರೀತಿಯಲ್ಲಿ ಚಿತ್ರಿಸಿದ್ದಾನೆ. ಕವಿಯ ಕಲಾನೈಪುಣ್ಯ ಇಂತಹ ಕಡೆಗಳಲ್ಲಿ ಮೇಲ್ಪಟ್ಟಿದ್ದಾಗಿದೆ ಎಂದು ಧಾರಾಳವಾಗಿ ಹೇಳಬಹುದು.

ಮುಂದೆ ಪಟ್ಟಾಭಿಷೇಕಕ್ಕೆ ಸನ್ನಾಹ, ಸೂರ್ಯಾಸ್ತ, ಸಂಧ್ಯಾಸಮಯ, ನಗರ ಶೃಂಗಾರದಲ್ಲಿ ಲಕ್ಷ್ಮಣಾದಿಗಳ ಆಸಕ್ತಿ, ಸೂರ್ಯೋದಯ ಇವುಗಳನ್ನು ಕುರಿತು ಹೇಳುವ ಎಂಟು ಪದ್ಯಗಳಿವೆ. ಆ ಬಳಿಕ ಪಟ್ಟಾಭಿಷೇಕಕ್ಕೆ ಸಂಬಂಧಪಟ್ಟ ವಿವರಗಳ ವರ್ಣನೆ ಇಪ್ಪತ್ತೇಳು ಪದ್ಯಗಳಲ್ಲಿ ಬಂದಿದೆ. ಮುಂದೆ ಋಷಿಗಳೆಲ್ಲರೂ ಸೇರಿ ಪಟ್ಟಾಭಿಷಿಕ್ತನಾದ ರಘುರಾಮನನ್ನು ಸ್ತೋತ್ರಗೈದರೆಂದು ಹೇಳುವಾಗ ಶ್ರೀರಾಮಚಂದ್ರನನ್ನು ಕುರಿತು ಕವಿ ಹಾಡಿದ ಇಪ್ಪತ್ತೆರಡು ಪದ್ಯಗಳಿವೆ. ಹರಿಹರರಲ್ಲಿ ಅಭೇದ ಕಲ್ಪನೆ, ವಿಷ್ಣುವಿನ ಮತ್ಸ್ಯ ಕೂರ್ಮ ವರಾಹಾದಿ ಅವತಾರಗಳ ವರ್ಣನೆ, ಉಪನಿಷತ್ತಿನ ಮಂತ್ರಗಳಲ್ಲಿ ಅಡಗಿರುವ ಪರವಸ್ತುವನ್ನು ಕುರಿತ ವರ್ಣನೆಯನ್ನು ಅಳವಡಿಸಿಕೊಂಡಿರುವ ಬಗೆ ಮುಂತಾದವುಗಳನ್ನೆಲ್ಲ ಇಲ್ಲಿ ನಾವು ಕಾಣುತ್ತೇವೆ. ಮತ್ತಿನ ಎಂಟು ಪದ್ಯಗಳಲ್ಲಿ ಒಡ್ಡೋಲಗದ ವರ್ಣನೆಯೂ ಆ ಮುಂದಣ ಮೂರು ಪದ್ಯಗಳಲ್ಲಿ ಉಚಿತವಾದ ಒಂದು ಮುಕ್ತಾಯವೂ ಬಂದು ಕಾವ್ಯ ಕೊನೆಗೊಳ್ಳುತ್ತದೆ. ಇದು ಸಂಕ್ಷೇಪವಾಗಿ ಕೃತಿಯ ಹೊರವಸ್ತು ಪರಿಚಯ.

## ೨

ಮೇಲೆ ಕಾಣಿಸಿರುವುದು ರಾಮನಾಮಾಮೃತದ ಬಿಂದಿಗೆಯ ಹೊರಗಣ ಪ್ರಮಾಣ ಗಾತ್ರ ಆಕಾರಗಳಿಗೆ ಸಂಬಂಧಪಟ್ಟ ಸ್ಥೂಲವಾದ ವಿವರಣೆ. ಇಲ್ಲಿ ಆ ಬಿಂದಿಗೆಯೊಳಗಣ ಅಮೃತದ ರುಚಿ ಸೊಬಗು ಇವುಗಳನ್ನು ಕುರಿತು ಬರೆದಿವೆ. 'ರಘುವರನ ಮೂರ್ಧಾಭಿಷೇಚನ ಸಮಸ್ತ ಚಾರಿತ್ರ'ವನ್ನು ವಾರ್ಧಕ

**ಷಟ್ಪದೀ ಕಾವ್ಯವಾಗಿ ಬರೆದಿರುವ ಮುದ್ದಣ ಕವಿ ಈ ಕೃತಿಯಲ್ಲಿ ತನ್ನ ರಾಮ** ಭಕ್ತಿಯನ್ನು ಮನೋಹರವಾಗಿ ಪ್ರಕಟ ಪಡಿಸಿದ್ದಾನೆ. 'ಕನ್ನಡದೊಳಿನ್ನ ಕಬ್ಬಂ ಬರೆಯೆವೊಟ್ಟೊಡೇಂ ಭಕ್ತಿವೈರಾಗ್ಯಸತ್ಕಥೆಗಳೆಸೆಯೆ' ಎಂದು ಕವಿ ಪ್ರಶ್ನಿಸಿದ್ದಾನೆ. ಈ ಕೃತಿ 'ರಾಮನಾಮಾಮೃತದ ಬಿಂದಿಗೆ' ಎಂದೂ ಇವರಲ್ಲಿ ಸತ್ಕಾವ್ಯಗಳ ಲಕ್ಷಣಗಳು ಇಲ್ಲದೆ ಹೋದರೂ ದೂಷಿಸಬಾರದೆಂದೂ ಹಾಗೆ ದೂಷಿಸುವವನು ಪಾಪಕ್ಕೆ ಪಕ್ಕಾಗುವನೆಂದೂ ಕವಿ ಮುನ್ನೆಚ್ಚರಿಕೆಯನ್ನಿತ್ತಿದ್ದಾನೆ. ರಾಮಪಟ್ಟಾಭಿಷೇಕದ ಕಥೆಯನ್ನು ಹೇಳಬೇಕೆಂದು ಪ್ರಾರ್ಥಿಸಿಕೊಂಡ ವಾತ್ಸ್ಯಾಯನನನ್ನು ಪ್ರೀತಿಯಿಂದ ಮೈದಡವಿ ಕುಳ್ಳಿರಿಸಿ ಆದಿಶೇಷನು ಹೇಳಲು ತೊಡಗುತ್ತಾನೆ: 'ನಿನಗೆ ಅನುಭವಂ ತನಗೆ ತೋಷಮಹುದು. ಉಪಲಬ್ಧಮಕ್ಕು ಸುಜ್ಞಾನ ಗರಿಮಗುಂ. ಇನ್ನು ಉಪಜೀವನಂ ತಾಪ ಸೌಘಕೆ ಎನೆ ಶಂಕೆ ಎಂಬ ಉಪರಾಗಮುಂ ಕಳೆದು ಚಿದ್ಭಾನು ಕಿರಣಮುಂ ಪಸರಿಪುದು ರಾಮಚರಿತಂ' ಎಂದು ಆದಿಶೇಷನು ಆಡಿದನೆಂಬ ಮಾತಿನಲ್ಲಿ ಮುದ್ದಣ ಕವಿ ತನ್ನ ಭಕ್ತ್ಯತಿಶಯದ ಒಂದು ಮುಖವನ್ನು ನಮಗೆ ಪರಿಚಯ ಮಾಡಿಸಿ ಕೊಡುತ್ತಾನೆ. 'ಹಾಲಿನ ಕಡಲನ್ನು ಕಡೆದರೆ ಅಮೃತ ಹುಟ್ಟುವ ಹಾಗೆ, ಚಂದನವನ್ನು ತೇದರೆ ಸುಗಂಧವನ್ನು ಬೀರುವ ಹಾಗೆ, ಚಿನ್ನವನ್ನು ಪುಟಕ್ಕೆ ಹಾಕಿದರೆ ಕಾಂತಿ ಹೆಚ್ಚುವ ಹಾಗೆ, ಕಬ್ಬಿನ ಕೋಲನ್ನು ಹಿಂಡಿ ಹಾಲು ತೆಗೆದು ಕಾಸಿದರೆ ಸಿಹಿಯಾದ ಬೆಲ್ಲವನ್ನು ಕೊಡುವ ಹಾಗೆ ಎಡಬಿಡದೆ ಶ್ರೀರಾಮಚರಿತಾಮೃತವನ್ನು ಮಥಿಸಿದರೆ ಸುಜ್ಞಾನದ ಪಿಂಡವನ್ನು ಪಡೆಯುತ್ತೇವೆ. ಅದು ಎಷ್ಟು ರುಚಿಯಾಗಿರುತ್ತದೆಯೋ' ಎಂದು ಆದಿಶೇಷ ವಾತ್ಸ್ಯಾಯನನಿಗೆ ಹೇಳುತ್ತಾನೆ. 'ಶ್ರೀಲೋಲನ ಅಭ್ಯುದಯದ ಚಾರಿತ್ರವನ್ನು ವರ್ಣಿಸಲು ನನಗೆ ಈ ನಾಲಗೆಗಳು ಸಾಲವು ಎನ್ನುವುದೊಂದೇ ನನ್ನ ಮನಸ್ಸಿನಲ್ಲಾಗಿರುವ ಅಳುಕು, ಅನುಮಾನ. ಆದರೂ ಸಾಧ್ಯವಿದ್ದಷ್ಟನ್ನು ಹೇಳುತ್ತೇನೆ' ಎನ್ನುತ್ತಾನೆ ಶೇಷ. ಅಪಾರವಾದ ಶ್ರೀರಾಮನ ಅಭ್ಯುದಯಪರಂಪರೆ ಹೇಗೆ ವರ್ಣನಾತೀತವಾದದ್ದೆಂಬುದನ್ನು ಕವಿ ಈ ಮೂಲಕ ನಮಗೆ ತಿಳಿಸುತ್ತಾನೆ. ಶ್ರೀರಾಮನ ವಿಷಯದಲ್ಲಿ ಕವಿಗೆ ಅಷ್ಟೊಂದು ಭಕ್ತಿ! 'ನರಲೀಲೆಯಿಂ ಖಳರ ಸ್ತೈಮಿಸಿಗಟ್ಟಿ ವಿಧಿ ದೇವಪಾಲಾದಿ ಸುರರ ರಕ್ಷಿಸಿದ ಗಡ! **ಹರಿಗೆನಿತು ಕರುಣಮೋ ತನ್ನವರೊಳು**' ಎಂದು ಕವಿ ಆ ಮಹಾಮಹಿಮನ ಆರ್ತ

ತ್ರಾಣಪರಾಯಣತೆಯನ್ನೂ ಶರಣಜನವಾತ್ಸಲ್ಯವನ್ನೂ ನೆನೆಯುವುದು ಬೇರೆ!!

ದಕ್ಷಿಣ ಸಮುದ್ರವನ್ನು ವರ್ಣಿಸುವ ನೆಪದಲ್ಲಿ ಶ್ರೀರಾಮನ ಲೋಕ ಕಾರುಣ್ಯವನ್ನು ಕವಿ ಬಗೆಬಗೆಯಾಗಿ ಕೊಂಡಾಡಿದ್ದಾನೆ. 'ಎಂತಾದೊಡಂ ತನ್ನಂ ಕಾವ ಕರುಣಿ' ಎಂದು ತೆರೆಗೈಗಳಿಂದ ಶ್ರೀರಾಮನನ್ನು ಅಪ್ಪಲೆಂದು ಬರುತ್ತಿದ್ದಾನೆಯೋ ಎನ್ನುವಂತೆ ಸಮುದ್ರ ತೋರಿತು. ಅನಿಮಿಷರು ಅಗ್ರಜರನ್ನು ದೂರಿದಾಗ ಖೂಳರನ್ನು ಮಡುಹಿ ನಂಬಿದವರಿಗೆ ಸುಖವಿತ್ತೆ. ನಾವೂ ಅನಿಮಿಷರು, ನಮ್ಮನ್ನು ನಿಷ್ಕಾರಣವಾಗಿ ಅಗ್ರಜರು ದ್ವೇಷಿಸುತ್ತಾರೆ. ವೈರಿಗಳನ್ನು ಬಗಿದು ನಮ್ಮನ್ನು ಕಾಪಾಡಬೇಕು ಎಂದು ರಾಘವನಿಗೆ ಹೇಳುವುದಕ್ಕಾಗಿ ಮೀನುಗಳು ಮೇಲೆ ನೆಗೆಯುತ್ತಿವೆಯೋ ಎಂಬಂತೆ ತೋರುತ್ತಿವೆ ಎಂದು ಕವಿ ವರ್ಣಿಸಿದ್ದಾನೆ. ಧರ್ಮವನ್ನು ಮೀರಿ ಸೀತೆಯನ್ನು ಒಯ್ದು ದೇವರಲ್ಲಿ ಸೊಕ್ಕಿ ನಡೆದ ರಾವಣನು ಅಳಿದನು, ಇನ್ನು ಆ ಪಟ್ಟಣದಲ್ಲಿ ವಾಸಿಸಬಹುದೆ? ಅದನ್ನು ಹಾಳು ಮಾಡಬೇಕು ಎಂದು ನುಗ್ಗಿ ಬರುವ ಸಮುದ್ರ, ನನಗೆ ಈ ಕಾರ್ಯ ಸರಿಯಲ್ಲ ರಾಮನ ಆಜ್ಞೆ ಹಿರಿದು, ಮರೆಹೊಕ್ಕವನಿಗೆ ಕೊಟ್ಟುಬಿಟ್ಟ ಎಂದು ಅಳುಕಿ ಮರಳುವಂತೆ ಸಮುದ್ರ ದಡಕ್ಕೆ ಹೊಡೆದು ಹಿಂದಕ್ಕೆ ಮರಳುತ್ತಿದೆಯಂತೆ! ರಾಮನ ಕರುಣೆಯೆಂಬ ಸಮುದ್ರವು ಸಾಕಾರವಾದಂತೆ ದಕ್ಷಿಣಾಂಬುಧಿ ಯಿದೆಯಂತೆ! ಸತ್ಯ, ಶರಣರಕ್ಷಣೆ, ಗಂಭೀರಭಾವ, ಸಾಹಸ, ಕೀರ್ತಿ, ಸತ್ವ ಇತ್ಯಾದಿ ಗುಣಗಳಲ್ಲಿ ದಾಶರಥಿಗೆ ಕಿರಿಯನಲ್ಲವೆಂಬಂತೆ ಶರಧಿ ಘೋಷಿಸುತ್ತಿತ್ತಂತೆ!

ಸಮುದ್ರವನ್ನು ವರ್ಣಿಸುವ ಸಂದರ್ಭದಲ್ಲಿ ಹೇಗೋ ಹಾಗೆ ಭರತನ ಭ್ರಾತೃವಾತ್ಸಲ್ಯವನ್ನು ವರ್ಣಿಸುವ ಸಂದರ್ಭದಲ್ಲಿಯೂ ಶ್ರೀರಾಮಭಕ್ತಿಯು ಭಾವಾತಿಶಯದ ಹೊನಲು ಕೋಡಿಯೊಡೆದ ಕೆರೆಯಂತೆ ಮೊರೆಮೊರೆದು ಹರಿಯುವುದನ್ನು ನಾವು ಕಾಣುತ್ತೇವೆ. ಶ್ರೀರಾಮಚಂದ್ರನ ಆಗಮನವನ್ನೇ ನಿರೀಕ್ಷಿಸುತ್ತ ನಂದಿಗ್ರಾಮದಲ್ಲಿ ನೆಲಸಿದ್ದ ಭರತನು ರಾಮನು ಹೇಳಿದ ಅವಧಿಗೆ ಸರಿಯಾಗಿ ಬಾರದೆ ತಳುವಿದನದೇಕೋ ಎಂಬ ಮನದ ಉಮ್ಮಳದಲ್ಲಿ ರಾಮಸಾಪೇಕ್ಷತ್ವದ ತೃಷೆಯಿಂದ ಬಾಯಾರಿ ತಹತಹಪಟ್ಟ ಸ್ಥಿತಿಯನ್ನು ವರ್ಣಿಸುವ ಒಂದೊಂದು ಪದ್ಯವೂ ಕವಿಯ ರಾಮಭಕ್ತಿಗೆ ಹೇಗೆ ಕನ್ನಡಿ ಹಿಡಿದಿವೆ ಎಂಬುದನ್ನು ಆ ಪದ್ಯಗಳನ್ನು ಓದಿಯೇ ತಿಳಿಯಬೇಕು. ರಾಮನ

ವಿಷಯದಲ್ಲಿ ಭರತನಿಗೆ ಇರುವ ಕಟ್ಟೆಚ್ಚರಿಕೆ, ಆತ ಕಾಣಿಸಿಕೊಳ್ಳದಂದು ಉಂಟಾದ ಕಡು ಮರುಕ, ತಳುವಿದ ಕಾರಣವೇನೆಂದು ಚಿಂತಿಸುವಾಗ ಮೂಡಿದ ತಳಮಳ, ನಾನು ದೀನ, ನಾನು ಭಾಗ್ಯಹೀನ, ನನ್ನಲ್ಲಿ ಭಯವಿಲ್ಲ ಭಕ್ತಿಯಿಲ್ಲ, ನಾನು ಅಣ್ಣನನ್ನು ದೇವನೆಂದು ತಿಳಿಯಲಿಲ್ಲ ಎಂಬೆಲ್ಲ ತರದ ಆತ್ಮನಿಂದೆ, ಆದ ಎಲ್ಲ ಅನಿಷ್ಟಪರಂಪರೆಗಳಿಗೂ ತಾನೇ ಕಾರಣನಾದೆನೇ ಎಂಬ ಉನ್ಮಳ, ಲಕ್ಷ್ಮಣನೇ ಧನ್ಯ ನಾನು ಅಣ್ಣನನ್ನು ಅಗಲಿ ಗತಿಗೆಟ್ಟೆ ಎಂಬ ನೋವು, ಸೀತಾ ಮಾತೆಗೆ ಅರಣ್ಯದಲ್ಲಿ ಒದಗಿರಬಹುದಾದ ಸಂಕಟಪರಂಪರೆಗಳ ವಿಷಯದಲ್ಲಿ ಸಹಾನುಭೂತಿ—ಈ ಮುಂತಾದ ಹತ್ತಾರು ತೆರನಾದ ಭಕ್ತಹೃದಯದ ಭಗವದ್ದರ್ಶನಾಕಾಂಕ್ಷೆಯ ವಿವರ ವಿವರಗಳ ವಿವಿಧ ಚಿತ್ರಗಳನ್ನು ಭರತನ ಉದ್ಗಾರಗಳಲ್ಲಿ ಕಾಣುತ್ತೇವೆ.

'ದಟ್ಟಡಿಯು ಸೋಂಕಿನಿಂ ಕಲ್ಗಳೆನಿತೊ ಕುಡಿ
ದಿಟ್ಟಿಗೆಡೆಗೊಂಡು ಕಾಲ್ಮೃಗಗಳೆನಿತೆನಿತೊ ಮೈ
ಮುಟ್ಟಲರ್ ಸೋಂಕೆ ಭೂಜಂಗಳೆನಿತೊ ಪಾವನಮಾದುವಾ ರಾಮನಿಂ'

ಕಲ್ಲು ಮರ ಗಿಡ ಬಳ್ಳಿ ಖಗ ಮೃಗಗಳೆಲ್ಲ ಶ್ರೀರಾಮಸಾನ್ನಿಧ್ಯಮಹಿಮೆಯಿಂದ ಪವಿತ್ರವಾದುವು ಎನ್ನುವ ಮಾತು ಆ ಮಹಾಮಹಿಮನ ಹಿರಿಮೆಗರಿಮೆಗಳಿಗೆ ಎಂತಹ ತುತ್ತೂರಿಯಾಗಿದೆ !

ರಾಮ ಜಯರಾಮ ದಶರಥರಾಮ ಕೋದಂಡ
ರಾಮ ಸೀತಾರಾಮ ಪಟ್ಟಾಭಿರಾಮ ರಘು
ರಾಮ ಕೋಸಲರಾಮ ನಿತ್ಯಾತ್ಮರಾಮ ಮೋಹನರಾಮ ಮಿತ್ರರಾಮ
ರಾಮ ಕೌಶಿಕರಾಮ ಸಾನಂದರಾಮ ಶಿವ
ರಾಮ ಕೌಸ್ತುಭರಾಮ ಕಲ್ಯಾಣರಾಮ ಶ್ರೀ
ರಾಮ ಸುಂದರರಾಮ ಸುಕುಮಾರರಾಮ ಶಾಂತರಾಮ ಭದ್ರರಾಮ

ಹೀಗೆ ಹಾಡುತ್ತ ಹಾಡುತ್ತ ಚಿತ್ತದಲ್ಲಿ ಶ್ರೀರಾಮನ ಮೂರ್ತಿಯನ್ನೂ ಜಿಹ್ವಾಗ್ರದಲ್ಲಿ ಆತನ ಕೀರ್ತಿಯನ್ನೂ ಹೊತ್ತು ಭರತನು ಅಗ್ನಿಯನ್ನು ಬಲವಂದನೆಂದು ಕವಿ ಬರೆದಿದ್ದಾನೆ. ಈ ಕೃತಿಯನ್ನು ರಚಿಸಿದ ಕವಿಯೂ ನಿತ್ಯ ಜೀವನದಲ್ಲಿ ಶ್ರೀರಾಮನ ಧ್ಯಾನದಲ್ಲಿ ತದೇಕಚಿತ್ತನಾಗಿ, ಭಕ್ತಿಭಾವಭರಿತನಾಗಿ ಹಾಡುತ್ತ ಆಡುತ್ತ ಇರುತ್ತಿದ್ದನೆಂದು ಧಾರಾಳವಾಗಿ ಹೇಳಬಹುದು. ಈ

ಕವಿ ಶ್ರೀರಾಮ ಪಕ್ಷಪಾತಿ ಎನ್ನುವುದು ಈತನು ತನ್ನ ಕಾವ್ಯಗಳಿಗೆ ಆರಿಸಿ ಕೊಂಡಿರುವ ವಸ್ತುಗಳನ್ನು ನೋಡಿದರೆಯೇ ತಿಳಿಯುತ್ತದೆ. ಶ್ರೀರಾಮ ಪಟ್ಟಾಭಿಷೇಕ, ಅದ್ಭುತರಾಮಾಯಣ, ರಾಮಾಶ್ವಮೇಧ ಈ ಮೂರು ಕೃತಿಗಳ ಲ್ಲಿಯೂ ಕವಿ ಸೀತಾರಾಮರ ಲೀಲಾಚಾರಿತ್ರಗಳನ್ನೇ ಚಿತ್ರಿಸಿದ್ದಾನೆ. ಈ ಮೂರು ಕೃತಿಗಳಲ್ಲಿಯೂ ಸೀತಾರಾಮರ ವಿಶುದ್ಧ ಗುಣಗಳಿಗೆ ಮಾರುಹೋದ ಕವಿಹೃದಯವನ್ನು ನಾವು ಕಾಣುತ್ತೇವೆ. ರಾಮಭಕ್ತಾಗ್ರೇಸರನಾದ ಮುದ್ದಣನ ಚಿತ್ತವೃತ್ತಿಯ ಸುಂದರವಾದ ಒಂದು ಮುಖವನ್ನು ನಾವು ಇಲ್ಲಿ ಈ ರಾಮ ಪಟ್ಟಾಭಿಷೇಕದ ಕೃತಿಯಲ್ಲಿ ಪರಿಚಯ ಮಾಡಿಕೊಳ್ಳುತ್ತೇವೆ ಮೇಲೆ ಕಾಣಿಸಿದ ಮುದ್ದಣಕೃತವಾದ ಭರತನ ರಾಮಧ್ಯಾನ ಶ್ಲೋಕ ಭಜಕರೆಲ್ಲರ ಧ್ಯಾನಶ್ಲೋಕ ವಾಗುವುದಕ್ಕೆ ಯೋಗ್ಯವಾಗಿದೆ. ನಿಷ್ಕಲವೂ ನಿರ್ಮಲವೂ ಆದ ಮನಸ್ಸಿನಿಂದ ಇಷ್ಟದೇವತೆಯ ಉಪಾಸನೆಯನ್ನು ನಡಸುವುದಾದರೆ ಆ ದೈವ ಸಾಕಾರವಾಗಿ ಎದುರು ಬಂದು ನಿಲ್ಲುವುದು ತಡವಾಗುವುದಿಲ್ಲ. ಕವಿ ಹಾಡಿದ್ದಾನೆ :

ರಾಮನೈತಂದನಸುರಾಂತಕಂ ಭುವನಾಭಿ
ರಾಮನೈತಂದನನುಗತ ಭಕ್ತ ಚಿತ್ತನಿವಾ
ರಾಮನೈತಂದನಮರೇಂದ್ರಪೂಜಿತ ಪಾದಪದ್ಮನೊದನೈತಂದನು
ಸೋಮಕೋದಂಡಭೇದ ಕನಕನಕುಲವಾರ್ಧಿ
ಸೋಮನೀಗಳೆ ಬಂದನಿತ್ತಲವಧರಿಪುದೆಲೆ
ಸೋಮಪುರಪೊಡೆಯ ಲಕ್ಷ್ಮೀಮನೋಹರನಿರವೆ ಬಂದನೆಮ್ಮಂ ಪೊರೆಯಲು

ಶ್ರೀರಾಮನ ನಿರೀಕ್ಷಣೆಯಲ್ಲಿರುವ ಭರತನ ಮನಸ್ಸಿನ ಉತ್ಕಂಠೆಯನ್ನು ಚಿತ್ರಿಸುವಾಗ ಕವಿ ಹೇಗೆ ಭಕ್ತಿಭಾವವನ್ನು ಪ್ರಕಟಪಡಿಸಿರುವನೋ ಹಾಗೆಯೇ ಆ ರಾಮಚಂದ್ರನ ಆಗಮನದ ಸಂದರ್ಭದಲ್ಲಿ ಭರತನಿಗೂ ಅಯೋಧ್ಯೆಯ ಪ್ರಜೆಗಳಿಗೂ ಉಂಟಾದ ಆನಂದಾತಿಶಯವನ್ನು ಚಿತ್ರಿಸುವಾಗ ಮತ್ತು ಆ ಅವಸರದಲ್ಲಿ ಅವರ ಸಡಗರ ಸಂಭ್ರಮಗಳ ಬಾಹುಳ್ಯವನ್ನು ವಿವರಿಸುವಾಗ ಕೂಡ ಕವಿ ರಾಮಪರವಾದ ಭಕ್ತಿಯನ್ನು ತುಂಬ ಸೊಗಸಾಗಿ ಚಿತ್ರಿಸಿದ್ದಾನೆ. ಒಮ್ಮೆ ಭಯ, ಒಮ್ಮೆ ಆಶ್ಚರ್ಯ, ಒಮ್ಮೆ ಗುಟ್ಟು, ಒಮ್ಮೆ ನಗೆ, ಒಮ್ಮೆ ಮುದ, ಒಮ್ಮೆ ಕಡುಪು, ಒಮ್ಮೆ ಸಟೆ, ಒಮ್ಮೆ ದಿಟ—ಹೀಗೆ ಬಗೆಬಗೆಯ ಭಾವಾನು ಭಾವಗಳಲ್ಲಿ ಭರತನ ಮನಸ್ಸು ಗಿರಗಿರನೆ ಸುತ್ತುತ್ತದೆ.

‘ಅಟವಿಯಿಂ ಪೊಱಟಿಹರೆ? ಬಹರೆ ದಾರಿಯೊಳು? ಏಂ ಪೋಱಟುದಿಲ್ಲವೇ? ರಾಮನೊಳ್ಳಿತಾಗಿಹನೆ? ಪರ್ಯಟನದಿಂ ಬಾಡಿಹರೆ? ಬರುತುಂ ಇರ್ಪನೆ? ಬಹರೆ? ಬಂದರೇ? ಪೇೞು’ ಎಂದು ಹನುಮಂತನನ್ನು ಬೆಸಗೊಳ್ಳುವ ಭರತನ ಹೃದಯದಲ್ಲಿ ರಾಮದರ್ಶನದ ಆಕಾಂಕ್ಷೆಯ ತುಯ್ತ ಎಷ್ಟು ತೀವ್ರವಾಗಿದೆ ಎಂಬುದನ್ನು ನಾವು ಕಾಣುತ್ತೇವೆ. ಪುಟ್ಟ ಪುಟ್ಟ ಮಾತುಗಳು, ಪ್ರಶ್ನೆಗಳ ಮೇಲೆ ಪ್ರಶ್ನೆ. ಉದ್ವಿಗ್ನಗೊಂಡ ಭರತನ ಬಗೆಯನ್ನು ಕವಿ ಎಷ್ಟು ಸ್ವಾರಸ್ಯವಾಗಿ ಚಿತ್ರಿಸಿದ್ದಾನೆ! ‘ನೋಡುವರ್ ದೆಸೆಯೆಂಟನೊರ್ಮೆ ಮೇಣೊರ್ಮೆ ಮಾತಾಡುವರ್....’ಎಂಬ ಪದ್ಯದಲ್ಲಿ ಅಯೋಧ್ಯೆಯ ಪುರನಿವಾಸಿಗಳ ಉತ್ಕಂಠೆಯನ್ನು ಕವಿ ಚಿತ್ರಿಸಿದ ರೀತಿಯೂ ಶ್ಲಾಘನೀಯವಾಗಿದೆ.

ಮುಂದೆ ರಾಮಚಂದ್ರನ ಆಗಮನ ಚಂದ್ರನ ಉದಯದಂತೆ ಆಯಿತು ಎಂದು ಹೇಳಿರುವ ರೀತಿಯಂತೂ ತುಂಬ ಮೋಹಕವಾಗಿದೆ. ‘ಜನರ ಸಂತೋಷವೆಂಬ ಸಮುದ್ರ ಉಕ್ಕೇರಿತು, ಬಾಲಕರ ನಗೆಯೆಂಬ ಬೆಳುದಿಂಗಳು ಹಬ್ಬಿತು, ಸುಮಂತ್ರಾದಿ ನಾಯಕರ ದುಃಖವೆಂಬ ಕತ್ತಲೆ ಹಿಂಗಿತು, ನೀರೆಯರ ಕಣ್ಣೆಂಬ ಚಕೋರಪಕ್ಷಿಗಳು ನಲಿದವು, ಭರತನ ಮನಸ್ಸೆಂಬ ನೈದಿಲೆ ಅರಳಿತು....’ಎಂದು ಮುಂತಾಗಿ ಕವಿ ವರ್ಣಿಸಿದ್ದಾನೆ. ಈ ಪದ್ಯವನ್ನು ಓದಿದೊಡನೆಯೇ ‘ಶ್ರೀವಧುವಿನಂಬಕಚಕೋರಕಂ ಪೊರೆಯೆ, ಭಕ್ತಾವಳಿಯ ಹೃತ್ಕುಮುದಕೋರಕಂ ಬಿರಿಯೆ, ಜಗತೀವಲಯದಮಲಸೌಭಾಗ್ಯರತ್ನಾಕರಂ ಪೇರ್ಚಿನಿಂ ಮೇರೆವರಿಯೆ’ ಎಂದು ಮುಂತಾಗಿ ಆರಂಭವಾಗುವ ಲಕ್ಷ್ಮೀಶಕವಿಯ ಜೈಮಿನಿಭಾರತದ ಮಂಗಳಶ್ಲೋಕದ ನೆನಪಾಗದೆ ಇರದು. ಜೈಮಿನಿಯನ್ನು ಮೆಲುಕಾಡಿರಬಹುದಾದ ಮುದ್ದಣನ ಮನಸ್ಸು ಆ ಶ್ಲೋಕದ ಭಾವಕ್ಕೆ ಒಳಗಾಗಿ ಸಂಸ್ಕಾರಗೊಂಡು ಈ ಸಂದರ್ಭದಲ್ಲಿ ಹೀಗೆ ಸಹಜಸುಂದರವಾಗಿ ಹೊರಹೊಮ್ಮಿತೆನ್ನಬಹುದೇನೊ!

ಪೈ ಕೋಳಿ ಕೂಗುವಂತೆ ಮಿಂದು, ಮಡಿಯುಟ್ಟು, ಗಂಧಾದಿಗಳನ್ನು ಪೂಸಿಕೊಂಡು ದಿವ್ಯವಾದ ವಸ್ತ್ರಾಭರಣಗಳನ್ನು ಧರಿಸಿಕೊಂಡು ತ್ರಿಪುಂಡ್ರಧಾರಿಯಾಗಿ ದಿವ್ಯಭೋಜನಾನಂತರದಲ್ಲಿ ಕರ್ಪೂರತಾಂಬೂಲವನ್ನು ಸವಿದು ಹೊರಹೊರಡುವುದು ವಾಡಿಕೆಯಷ್ಟೆ! ಕವಿ ಭರತನನ್ನು ಹೇಗೆ ಇಲ್ಲಿ ಚಿತ್ರಿಸಿದ್ದಾನೆ ನೋಡಿ : ಕಣ್ಣೀರಿನಲ್ಲಿ ಮುಳುಕು ಹಾಕಿದ್ದಾನೆ, ಕಿರುಬೆಮರು ಹನಿಗಳನ್ನು ಪೂಸಿದ್ದಾನೆ, ನವಿರಿನ ಉಡೆಯನ್ನೇ ಉಟ್ಟಿದ್ದಾನೆ, ರಘುರಾಮನಾಮವನ್ನು

ಬಗೆಯಲ್ಲಿ ಇಟ್ಟುಕೊಂಡಿದ್ದಾನೆ, ಭ್ರಾತೃಪ್ರೇಮದ ಅಮೃತವನ್ನು ಉಂಡಿದ್ದಾನೆ, ಉದ್ದವಾಗಿ ಬರುವ ತಡೆಯುಸಿರನ ತೇಗು ತೇಗಿದ್ದಾನೆ, ಮುಖದ ಅನುರಾಗವೆಂಬ ನರುಗಂಬುಲವನ್ನು ಸವಿದಿದ್ದಾನೆ, ಆ ಬಳಿಕ ಅಣ್ಣನ ದರ್ಶನಕ್ಕಾಗಿ ಹೊರಟಿದ್ದಾನೆ!

'ಬಾರಣ್ಣಾ ಅಣ್ಣಾ ಬಾ ದೇವ' ಎಂದು ಪ್ರೀತ್ಯಾದರಗಳಿಂದ ನುಡಿಸಿ ಸ್ವಾಗತ ಬಯಸುವ ಭರತನ ಆ ಹೊತ್ತಿನ ಮನಸ್ಸು ಹೇಗೆ ಆನಂದಭರಿತವಾಗಿತ್ತೆಂಬುದನ್ನು ಕವಿ ಚಿತ್ರಿಸಿರುವ ರೀತಿಯನ್ನು ನೋಡಿ: 'ನಡುಕಂ ಪೊದಳ್ದು ಕಡೆಗಾಲ್ಗಳಿಂ ಪರಿದು, ನೀರ್ಗುಡಕೆಂ ಪಸುಳ್ದು ಬಿಡುಗಣ್ಗಳಿಂ ಪರಿದು ಕಂಡು, ಅಡಕಂ ನರಳ್ದು ಪಿಡಿಗೊರಲಿಂ ಕರೆದು' ನುಡಿದನಂತೆ 'ಅಣ್ಣಾ! ಬಾರಣ್ಣಾ ದೇವ' ಎಂದು. ಎಂತಹ ಭ್ರಾತೃವಾತ್ಸಲ್ಯ! ಎಷ್ಟು ಆತ್ಮೀಯತೆ! ಏನು ಭಕ್ತಿ! ಏನು ಪ್ರೇಮ! ಮತ್ತೆ ಮತ್ತೆ ಭರತ ಹೇಳುತ್ತಾನೆ: 'ಮಡದಿಯ ಮೆದುಗೈ ಒತ್ತುವ ಅಡಿ ಕಲ್ಲು ಒತ್ತಿದೆಡೆ ನವೆಯೆ, ಪೂದೋಟಮುಂ ತಿರಿವ ಕಾಲು ಕಾಡ ಸುತ್ತಿ, ಒಳ್ ಬಟ್ಟೆ ಬಿಗಿವ ನಡು ನಾರನ್ ಉಡೆ, ಪಟ್ಟಗೋಲೆಸೆವ ಕೈ ಊರುಗೋಲಂ ಪಿಡಿಯೆ, ತಿರೆಸಿರಿವೊಳುವ ತೋಳ್ಮುಡು ಬಗಲ್ಗಂಟಿಗೆಡೆಯಾಗೆ ಇಂತು ಪೊಸ ಸೊಗವ ನೀನು ಉಂಡುದು ಏಕೆ ಒಡೆಯ?'—'ಅಡವಿಗೆ ಹೋದದ್ದಾಗಲಿ ಕಾಡಿನಲ್ಲಿ ತೊಳಲಿದ್ದಾಗಲಿ ರಕ್ಕಸರನ್ನು ಹೊಡೆದು ಕೊಂದದ್ದಾಗಲಿ ಆಶ್ಚರ್ಯವಲ್ಲ, ಹೆಚ್ಚಿನದಲ್ಲ; ಆದರೆ ಖೋಡಿಯೂ ಘಾತಕಿಯೂ ಪಿಸುಣನೂ ಅತಿ ಕೋಪಿಯೂ ಪಾಪಿಯೂ ಕುಲಗೇಡಿಯೂ ಭ್ರಾತೃದ್ರೋಹಿಯೂ ಆದ ನನಗೆ ಮಾತು ಕೊಟ್ಟಂತೆ ನಾನು ನಿನ್ನಲ್ಲಿ ಕೇಳಿಕೊಂಡಂತೆ ನನ್ನನ್ನು ಕಾಪಾಡುವುದಕ್ಕಾಗಿ ಹೀಗೆ ಬಂದೆಯಲ್ಲಾ ಇದೇ ಹೆಚ್ಚಿನದು ಇದೇ ಆಶ್ಚರ್ಯ' ಎಂದು ಭರತನು ರಘುರಾಮನ ಕಾಲಿಗೆ ಎರಗಿದನಂತೆ. ಭರತನ ಬಂಧುಪ್ರೇಮದ ಪರಾಕಾಷ್ಠೆ ಇದು. ವಿನಯಪೂರ್ಣವೂ ಅಹಂಕಾರಮಮಕಾರಶೂನ್ಯವೂ ಆದ ಆ ತಮ್ಮನ ಹೃದಯದಲ್ಲಿರುವ ಆ ಭಕ್ತಿಯನ್ನೂ ಆ ಶರಣ್ಯಾವೃತ್ತಿಯನ್ನೂ ಮುದ್ದಣ ಕವಿ ಕಲಾಪೂರ್ಣವಾಗಿ ವಿವರಿಸಿದ್ದಾನೆ.

ಭರತನ ಈ ಭಕ್ತಿಗೆ, ಈ ಪ್ರೀತಿ ವಿಶ್ವಾಸಗಳಿಗೆ, ಈ ವಿನಯ ಸೌಜನ್ಯಗಳಿಗೆ ರಾಮನು ಮಾರುಹೋಗುತ್ತಾನೆ. ಭಕ್ತರನ್ನು ನೋಡುವ ಅಪಾಂಗದಿಂದ ಕಟಾಕ್ಷಿಸಿ, ತನ್ನನ್ನು ಮರೆಹೊಕ್ಕವರಿಗೆ ಅಭಯವನ್ನು ತೋರುವ

ಅಮರ್ದುಗ್ಗೈಗಳಿಂದ ಪಿಡಿದೆತ್ತಿ, ಸಿರಿಯುನ್ನು ಅಪ್ಪುವ ತೋಳುಗಳಿಂದ ಅಪ್ಪಿ, ಅಂಗಸಂಗವನ್ನಿತ್ತು, ಪ್ರಣವ ನವಮೂಲ ಸೂಕ್ತಿಗಳೊಗೆದಡಂಗಿ ನೆಲೆಗೊಂಡ ನಲ್ಬಾಯಿಯಿಂದ ರಘುಪುಂಗವನು ಅನುಜನನ್ನು ನುಡಿಸುತ್ತಾನೆ. 'ಭರತನೇಂ ಕೃತಾರ್ಥನೊ ಧರೆಯೊಳು!'

ಶ್ರೀರಾಮನ ಆಗಮನದ ಸಂದರ್ಭದಲ್ಲಿ ಪೌರಜನರು ಹೇಗೆ ಸಂಭ್ರಮ ಗೊಂಡಿದ್ದರೆಂಬುದನ್ನು ಚಿತ್ರಿಸುವ ಸಂದರ್ಭದಲ್ಲಿ ಸ್ವಾಮಿ–ಭೃತ್ಯ ಸಂಬಂಧದ ಒಂದು ಭಕ್ತಿಯ ಭಾವೋದ್ರೇಕವನ್ನು ಕವಿ ಚಿತ್ರಿಸಿದ್ದಾನೆ. 'ಅಟ್ಟಿಯಿಂ ಪಥ ವಿಡಿದು ಬರ್ಪ, ಬಂದಟ್ಟಳೆಯಿಂ ನರ್ತಿಪ, ನಲಿದು ಕೂಡಿ ಕೀರ್ತಿಪ, ನಮಂತು ಸಂಕೀರ್ತಿಸಿ ಮನಂಗೊಳ್ವ, ಮನಗೊಂಡು ಕಾಣ್ಬ ಕಂಡಿತ್ತಲುಂ ಸುತ್ತುವರಿವ, ಕೂರ್ತು ಪರಿದೆಡೆಯುರಂ ಸೇರ್ವ, ಸೇರ್ದವರೊಡನೆಸಿದಿರ್ತಿರುಗಿ ಪೋಪ, ಪೋಗಿತ್ತಬಹನೋಡೆಂದು ವರ್ತಮಾನವನೊರೆವ' ಪುರಜನರು ರಾಮನ ಕಣ್ಣಿಗೆ ಕಾಣಿಸಿದರಂತೆ! ಈ ಪೌರರು ಮಣಿಯುವುದೇನು, ಬಲವರುವುದೇನು, ಪಾಡುವುದೇನು, ನೋಡುವುದೇನು, ಕುಣಿಯುವುದೇನು, ಹರಸುವುದೇನು, ಸೇವೆಗೈವುದೇನು, ನುಡಿಸುವುದೇನು, ಬವಣೆಯೆನಿಸಿ ಮರುಗುವುದೇನು, ಸಂತಸಗೊಳ್ಳುವುದೇನು, ಪೊಸ ಬಿನದವನ್ನು ತೋರುವುದೇನು, ಮೌನವಿರುವುದೇನು, ಫಲ ಕುಸುಮಾದಿಗಳನ್ನು ಅರ್ಪಿಸುವುದೇನು, ರತ್ನಾದಿಗಳನ್ನು ಕಾಣಿಕೆ ಕುಡುವುದೇನು! ಇವರ ಬಗೆಬಗೆಯ ಸಂಭ್ರಮಾತಿಶಯಗಳನ್ನು ಹಾಡಿದಷ್ಟು ಹೊಗಳಿದಷ್ಟು ಕವಿಗೆ ತೃಪ್ತಿಯಿಲ್ಲ.

ವಾತ್ಸಲ್ಯಭಕ್ತಿಯ ಸುಂದರವಾದ ಚಿತ್ರ ಬೇಕಾದರೆ ಕೌಸಲ್ಯೆ ಮತ್ತು ರಾಮ ಇವರ ಸಮಾಗಮದ ಸಂದರ್ಭ ನೋಡಬೇಕು. 'ಪೂಮುಡಿದ ತಾವರೆ ವಳ್ಳಿ'ಯಂತೆ ಬಾಡಿದ್ದಾಳೆ ಕೌಸಲ್ಯೆ! ಎಳಗಂದಿ ಹಸು ಕಣ್ಮರೆಯ ಕರುವ ನಾರೈವಂತೆ ರಾಮನಿಗಾಗಿ ಹಂಬಲಿಸುತ್ತಿದ್ದಾಳೆ. ಇಂತಹ ಸಮಯದಲ್ಲಿ ಸಖಿಯರು ಬಂದು ಮಖರಕ್ಷಕನೂ ಜಾನಕೀವಲ್ಲಭನೂ ಪಿತೃವಚನಪಾಲನೂ ಇಂದ್ರಜಾರಿಯೂ ನಿಖಿಲಮರ್ಕಟನುತನೂ ಖರ ಕುಂಭಕರ್ಣ ಪ್ರಮುಖ ದಾನವಾಂತಕನೂ ಶರಣಾಧೀನತಪ್ರದನೂ ಆದ ರಾಮನು ಸುಖವಾಗಿ ಲಕ್ಷ್ಮಣ ಮತ್ತು ಸೀತೆ ಇವರೊಡನೆ ಬಂದಿದಾನೆ. ಇದೋ ನೋಡುವುದಕ್ಕೆ ಎದ್ದೇಳು' ಎನ್ನುತ್ತಾರೆ. ಆಗ ಕೌಸಲ್ಯೆ 'ರೋಮಾಂಚಮೊಡನೆ ತಲೆದೋರೆ ವ್ಯೈ

ಯೋಱಿ ಸಂತಸದ ಕಂಬನಿ ಪೇಱಿ ಪೋರೆಯುರಳೆ, ಕಡೆವಗಲ ಜಾಜಿಮಲ್ಲಿಗೆ ಯಂತೆ ನಸುನಸುಂ ಪೆಡಮೆಟ್ಟಿ ದುಗುಡಂ, ಅರುಣೋದಯದ ಮುರ್ಬಿನೊಳ್ ಕಡುತಪಕದಿಂ' ಆತ್ಮಜನ ಬರವನ್ನು ನಿರೀಕ್ಷಿಸಿಕೊಂಡಿರುತ್ತಾಳೆ.

ಇತ್ತ ರಾಮ ಕೈಕೆ ಸುಮಿತ್ರೆಯರನ್ನು ಕಂಡು 'ಕವಿದು ರಿಂಗಣಗುಣಿದು ಸುಟಿದಾಡಿ ತಾಯೆಡೆಗೆ ಜವದಿಂ ಮಗಳ್ವ ಕಱುವಂತೆ ಸಂತಸದಿ' ಅಬ್ಬೆಯರ ಮನೆಗೆ ಧಾವಿಸಿ ಬರುತ್ತಾನೆ. ಈ ತಾಯಿಮಕ್ಕಳ ಪುನರ್ಮಿಲನದ ಚಿತ್ರ ವನ್ನು ತುಂಬ ಹೃದ್ಯವಾಗಿ ಕವಿ ಚಿತ್ರಿಸಿದ್ದಾನೆ: 'ಮುಗಿದರಳೆ ನೋಟ್ಟಿ ಕಂಗಳ, ಬಿಗಿ ಸಡಿಲ್ದ ಪುರ್ಬುಗಳ, ಬೆಮರೊಡೆದು ನೆಱಿಬುಬ್ಬುವಾನನದ, ಪೊರ್ದುಗೆಗೊಂಡ ಜಡೆಯ, ತೊಡವಿಲಿ ತೊಡಂಕೆಯ, ಕುಗ್ಗಿ ನೇರಮೆಟ್ಟಿ ಪ್ಪ ಗಳದ, ಸುಗಿದೊಗದ ಮೆಯ್ಯ, ನೀರ್ತಂಗೊಂಡು ಭಾವಿಸುವ ಬಗೆಯ ನಿಜ ಮಾತೆಯಂ' ರಾಘವನೂ 'ರಾಹು ಕೈದೆಗೆದ ಶಶಿಯಂತೆ ಎಸೆವ ರಾಮನಂ' ಕೌಸಲ್ಯೆಯೂ ನೋಡಿದರು. ಇಬ್ಬರಲ್ಲಿಯೂ ಏಕಕಾಲದಲ್ಲಿ ನೆಱಿಗೊರಲೂ ನಡುಕವೂ ನಿರ್ಮಿಗೂರ್ಪಲೂ ಎಱಿಮನವೂ ಕಿಱುಬೆಮರೂ ಸೊಗದ ಕಂಬ ನಿಯೂ ಬನ್ನದಟೀವೂ ಬೇಸಱದಟೀವೂ ಮೋಹಮೊಗದೊಳ್ಪೂ ಮೈವೆಳ್ಪೂ ತಲೆದೋರಿದವು. ಪರಸ್ಪರ ಮುಖಾವಲೋಕನದಿಂದ ಒಗೆದ ಈ ರೀತಿಯ ಅನ್ಯೋನ್ಯ ದರ್ಶನಸುಖ ಅಸ್ವಾದ್ಯಕರವಾದದ್ದು. ಇದಕ್ಕೆ ಮತ್ತೊಂದನ್ನು ಹೋಲಿಸುವುದಾದರೆ ಮತ್ತೆ 'ದಾಶರಥಿ ಕೌಸಲ್ಯೆಯರ ದರ್ಶನದಂತೆವೋಲ್' ಎಂದೇ ಹೇಳಬೇಕಂತೆ. ಸಾಗರಕ್ಕೆ ಸಾಗರವೇ ಉಪಮಾನ ಹೇಗೋ ಗಗನಕ್ಕೆ ಗಗನವೇ ಉಪಮಾನ ಹೇಗೋ ರಾಮ ಕೌಸಲ್ಯೆಯರ ದರ್ಶನಸುಖವೇ ಹಾಗೆ ಉಪಮಾನ, ಆ ದರ್ಶನಸುಖಕ್ಕೆ!

ಮುಂದೆ ಶ್ರೀರಾಮನು ತಾಯಿಗೆ ಮಣಿದನೆಂದು ಹೇಳುವ ಈ ಪದ್ಯದ ಸೊಗಸು ನೋಡಿ:

ಕಿತ್ತಡಿಯ ಜನ್ನಮುಂ ಕಾದು, ಪೆಣ್ಣೈದಡಿಯ
ನೊತ್ತಿ ಕಲ್ಲಂ, ಹರನ ಬಿಲ್ಮುಱಿದು, ಭಾರ್ಗವನ
ನೊತ್ತಟ್ಟಿಗುಱಿದಯ್ಯನಾಣೆಯಂ ಬಿಡದಡವಿಯಂ ಸಾರ್ದು, ಕೀಶರ್ಕಳ
ಮೊತ್ತಮುಂ ಪೊರೆದು, ಕಡಲಂ ಕಟ್ಟಿ, ದಾನವರ
ನೆತ್ತರಂ ಚೆಲ್ಲಿ, ತಿರೆವೊಱೆಯಿೞಿಸಿದ ಜಸವಂ
ಪೊತ್ತ ಭಾರಕೆ ಸಿರಂ ಬಾಗಿತೆನೆ, ಮಾತೆಯಡಿಗೆಱಗಿದಂ ಶ್ರೀರಾಮನು

ತಾಯಿ ಮಕ್ಕಳ ಮಾತು ಕಥೆಯನ್ನು ಇಲ್ಲಿ ವಿವರಿಸುವುದಕ್ಕೆ ಅವಕಾಶ ವಿಲ್ಲ. ಕವಿ ಕೊನೆಯಲ್ಲಿ ಹೇಳುವ ಇನ್ನೊಂದು ಉಪಮೆಯಿಂದ ಈ ಭಾಗ ವನ್ನು ಮುಗಿಸಬಹುದು. ಕೌಸಲ್ಯೆಯು ಎಡ ಬಲಗಳಲ್ಲಿ ನಿಂತ ಜನಕಜಾ ರಾಮರು ಹೇಗೆ ಕಂಡರು? ಕವಿ ಹೇಳುತ್ತಾನೆ: 'ಅದಿತಿದೇವಿಯಿರ್ಕೆಲದೊಳಂ ದೊರ್ವೆ ಮೆಱೆದೊಪ್ಪಿದ ಶಚೀಂದ್ರರಂತೆ!' ಮಾತೆಯನ್ನು ಬೀಳ್ಕೊಂಡು ಸೀತಾರಾಮರು ತಮ್ಮ ಅರಮನೆಗೆ ಬಂದರು ಹೇಗೆ? ಕವಿ ಹಾಡಿದ್ದಾನೆ: 'ಕಾಂತೆಯೊಡನರಮನೆಗೆ ಪುಳಿನದೊಳ್ ನಲಿದಾಡಿ ಸಂತಸದೊಳೆಸೆವೆರಸು ಸರಸಿಗೈತರ್ಪ್ಪಂಚೆಯಂತೆ ರಾಮಂ ಬಂದನು.'

ಅಭಿಷೇಕಾನಂತರದಲ್ಲಿ ಒಡ್ಡೋಲಗದಲ್ಲಿ ವಿರಾಜಮಾನನಾದ 'ಪಟ್ಟಾಭಿ ರಾಮ'ನನ್ನು ಅಮಲಗುಣಸಾಂದ್ರರಾದ ಮುನೀಂದ್ರರು ಪೊಗಳಿ ಹಾಡಿದ ರೆಂಬ ಸಂದರ್ಭದಲ್ಲಿ ಬರುವ ಸ್ತೋತ್ರಗೀತೆ ಶ್ರುತಿವಾಕ್ಯಗಳ ಭಂಡಾರದಿಂದ ಆಯ್ದು ತೆಗೆದ ಮುತ್ತು ರತ್ನಗಳಿಂದ ಕೋದ ಕಂಠಾಭರಣದಂತೆ ಶೋಭಿಸು ತ್ತದೆ. ಭಕ್ತಿಯ ಸೂತ್ರದಲ್ಲಿ ಅನಂತ ಚಿತ್‌ಪ್ರಧಾನ ಗುಣಮಣಿಗಳನ್ನು ಪೋಣಿಸಿ ಪೋಣಿಸಿ ಕವಿ ಸುರಮ್ಯವಾದ ಹಾರವನ್ನು ಅಣಿಮಾಡಿ ಶ್ರೀರಾಮನ ಕೊರಳಿಗೆ ಅಲಂಕಾರದ ತೊಡವಾಗಿ ನಿವೇದಿಸಿದ್ದಾನೆ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ | ಯೇನ ಜಾತಾನಿ ಜೀವಂತಿ | ಯತ್ಪ್ರಯಂತಿ ಅಭಿ ಸಂವಿಶಂತಿ | ತದ್ವಿಜಿಜ್ಞಾಸಸ್ವ | ತದ್ ಬ್ರಹ್ಮೇತಿ |' (ಯಾವುದರಿಂದ ಎಲ್ಲ ಭೂತಮಾತ್ರಗಳು ಹುಟ್ಟುವುವೊ ಯಾವುದರ ಬಲದಿಂದ ಬಾಳುವುವೊ ಯಾವುದ ರಲ್ಲಿ ಲಯಹೊಂದುವುವೊ ಅದೇ ಸತ್ಯವು ಅದನ್ನು ತಿಳಿದುಕೋ); 'ಅಣೋ ರಣೀಯಾನ್ ಮಹತೋ ಮಹೀಯಾನ್ ಆತ್ಮಾಸ್ಯ ಜಂತೋರ್ನಿಹಿತೋ ಗುಹಾ ಯಾಮ್ ||' (ಪ್ರಾಣಿಯ ಹೃದಯಗುಹೆಯಲ್ಲಿರುವ ಆತ್ಮವಸ್ತುವು ಅಣುವಿ ಗಿಂತಲೂ ಅಣುವಾಗಿರುವುದು, ಮಹತ್ತಿಗಿಂತಲೂ ಮಹತ್ತರವಾಗಿರುವುದು); 'ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್' (ಈ ವಿಶ್ವವನ್ನು ವ್ಯಾಪಿಸಿ ಅವನು ದಶಾಂಗುಲ ಹೆಚ್ಚು ಉಳಿದಿರುವನು); 'ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ' (ಎಲ್ಲ ಭೂತ ಜಾತಗಳ ಅಂತರಾತ್ಮನಾಗಿಯೂ ಎಲ್ಲರಲ್ಲಿ ವ್ಯಾಪಿಸಿಯೂ ಎಲ್ಲರಲ್ಲಿ ಗೂಢ ವಾಗಿಯೂ ಒಬ್ಬ ದೇವನಿದ್ದಾನೆ); 'ಇಂದ್ರೋ ಮಾಯಾಭಿಃ ಪುರುರೂಪ

**ಈಯತೇ ಯುಕ್ತಾಹ್ಯಸ್ಯ ಹರಯಃ ಶತಾದಶ'** (ಇಂದ್ರನು ತನ್ನ ಮಾಯೆಯಿಂದ ಬಹುರೂಪಗಳನ್ನು ಧರಿಸಿದನು) ;—ಈ ಮುಂತಾದ ಉಪನಿಷದ್ವಾಕ್ಯಗಳನ್ನು ಕನ್ನಡಿಸಿ ಹೇಳಿರುವ 'ವಿಶ್ವವಿಸ್ತಾರಣಾದಿ ಹೇತು', 'ಅಣೋರಣೀಯನುಂ ಮಹತೋ ಮಹೀಯನುಂ', 'ಅತ್ಯತಿಷ್ಠದ್ದಶಾಂಗುಲಮೆನೆ', 'ಚರಾಚರದ ಚೈತನ್ಯಾತ್ಮ', 'ಜೀವ ಯೋನಿ ಪ್ರಜನಮಂ ಮಾಯಾಬೀಜದೊಳೆಯಿಂ ಸೃಜಿಸಿ'—ಮುಂತಾದ ಸೂಕ್ತಿಗಳನ್ನೊಳಗೊಂಡ ಈ ಋಷಿಗಳ ಸ್ತೋತ್ರ ಕವಿಯ ವೇದಾಂತಜ್ಞಾನಕ್ಕೆ ಕನ್ನಡಿ ಹಿಡಿದಿದೆ. ಶ್ರೀರಾಮನು ಪಾಪರಹಿತನು, ಹಂಸಸ್ವರೂಪಿಯಾದ ಭಗವಂತನು, ಪ್ರಪಂಚದ ವಿಸ್ತಾರಕ್ಕೆ ಆದಿಕಾರಣನು, ಮೋಕ್ಷಲಕ್ಷ್ಮಿಗೆ ಒಡೆಯನು, ಸತ್‌ಸ್ವರೂಪನು, ಪೃಥಿವಿಯೇ ಮುಂತಾದ ೨೫ ತತ್ತ್ವಗಳಿಗಿಂತ ಬೇರೆಯಾಗಿರುವವನು, ಸೃಷ್ಟಿಕರ್ತನು, ಅನೇಕವಾದ ಲೋಕವ್ಯಾಪಾರಗಳನ್ನು ನಡಸುವವನು, ಇಂದ್ರಿಯಾತೀತನು, ಧ್ಯಾನಕ್ಕೆ ಸಿಗದವನು, ಜ್ಞಾನಸ್ವರೂಪನು, ಸ್ಥಾವರ ಜಂಗಮಾತ್ಮಕವಾದ ಸಕಲ ಜೀವರುಗಳಿಗೂ ಚೈತನ್ಯದಾಯಿಯಾಗಿರುವವನು, ಸರ್ವಾಂತರ್ಯಾಮಿ, ಓಂ ಶಬ್ದ ಪ್ರತಿಪಾದ್ಯನು, ಪರಕ್ಕೆ ಪರವಾದವನು, ಎಲ್ಲಕ್ಕೂ ಮಿಗಿಲಾದವನು, ಸುಗುಣ ದುರ್ಗುಣರಹಿತನು, ಎಣೆಯಿರದ ದ್ವೈತಳಿದು ಬಂದವನು, ಹಾಗಿದ್ದಾನೆ ಹೀಗಿದ್ದಾನೆ ಎಂದು ಹೇಳುವುದಕ್ಕಾಗದೆ ಇದ್ದಾನೆ ಎಂದು ಮಾತ್ರ ಹೇಳಬಹುದಾದವನು, ಸತ್‌ಪುರುಷರ ಜ್ಞಾನದಲ್ಲಿ ಹೊಳೆಯುವವನು, ಸ್ಥಿರನು, ಪರಿಣಾಮರಹಿತನು, ವಿದ್ವಾಂಸರ ಮನೋಮಂದಿರದಲ್ಲಿ ನಾಟ್ಯವಾಡುವವನು, ಅಂತರ್ಯಾಮಿಯಾಗಿ ಸಮಸ್ತ ಜಗತ್ತನ್ನೂ ಧರಿಸಿರುವವನು, ವೇದಗಳಿಗೆ ಕಾರಣನಾದವನು, ಶತ್ರುಗಳಿಗೆ ಭಯಂಕರಸ್ವರೂಪನಾಗಿರುವವನು, ಇಷ್ಟಾರ್ಥಗಳನ್ನು ಕೊಡುವವನು, ಜಗನ್ಮಾಯೆಗೆ ಆಶ್ರಯನಾಗಿರುವವನು, ಯೋಗಿಗಳು ಯಾವನಲ್ಲಿ ರಮಿಸುವರೋ ಅಂತಹ ಹೆಸರನ್ನು (ರಾಮನು) ಹೊಂದಿರುವವನು, ಸಮಸ್ತ ಬ್ರಹ್ಮಾಂಡವನ್ನೂ ಒಡಲಲ್ಲಿ ಧರಿಸಿಕೊಂಡು ಎಲ್ಲ ಕಡೆಯೂ ಎಲ್ಲವನ್ನೂ ಆವರಿಸಿಕೊಂಡಿರುವ ಶರೀರವನ್ನು ಉಳ್ಳವನು, ಸಮಸ್ತ ತತ್ತ್ವಗಳು ಪರಿಣಾಮವನ್ನು ಹೊಂದತಕ್ಕವಾಗಿರಲು ತಾನು ಮಾತ್ರ ಪರಿಣಾಮರಹಿತನಾಗಿ ಉಳಿಯುವವನು, ವೇದಗಳು ಬಣ್ಣಿಸಿ ಬಣ್ಣಿಸಿ ನೆಲೆ ಕಾಣಲಾರದೆ ಹೋದವನು. ಅಂತಹ ವಿರಾಟಸ್ವರೂಪನು ಈಗ ಹೀಗೆ ಸಿಂಹಾಸನದ ಅಳತೆಗೆ ತಕ್ಕಂತೆ ಕಿರಿದಾದ ಆಕಾರ

ವನ್ನು ತಳೆದು ಕುಳಿತಿರುವವನು, ಅಣುವಿನೊಳಗೆ ಅದಕ್ಕಿಂತಲೂ ಅಣುವಾಗಿ ಅದರ ಒಳಗನ್ನು ವ್ಯಾಪಿಸಿಕೊಂಡು ಮಹತ್ತಾದ ವಸ್ತುವಿನ ಮೇಲೆ ಅದಕ್ಕೂ ಮಹತ್ತಾಗಿ ಅದನ್ನು ಮೇಲೆ ಕೆಳಗೆ ಒಳಗೆ ಹೊರಗೆ ಸುತ್ತಮುತ್ತ ಎಲ್ಲವನ್ನೂ ವ್ಯಾಪಿಸಿಕೊಂಡು ಇರುವವನು, ಸಮಾಧಿಸ್ಥರಾಗಿ ಆತ್ಮಾರಾಮರಾಗಿರುವ ಮಹಾ ಮಹಾಯೋಗಿಗಳ ಮನೋಗತಿಗೆ ಕೂಡ ಸಿಕ್ಕದೆ ಇರುವವನು, ಸಮಸ್ತವನ್ನೂ ದಾಟಿ ಅದರಾಚೆಗೂ ಚಾಚಿಕೊಂಡಿರುವವನು, ರಾಗಭೋಗಗಳನ್ನು ತ್ಯಜಿಸಿ ವೇದಾಗಮಗಳನ್ನು ಅಭ್ಯಸಿಸಿ ಆತ್ಮಸಂಸ್ಕಾರದಿಂದ ದೇಹಗುಣಗಳನ್ನು ತೊಲಗಿಸಿ ಬ್ರಹ್ಮನಲ್ಲಿ ಮನಸ್ಸನ್ನು ನಾಟಿಸಿ ಯೋಗಾಭ್ಯಾಸದಿಂದ ಹೃತ್‌ಕಮಲ ವನ್ನು ಪುಷ್ಟಿಗೊಳಿಸಿದೆವು ಎನ್ನುವ ಎಂತೆಂತಹ ಮಹಾ ಮಹಾ ಅಧ್ಯಾತ್ಮ ಯೋಗಿಗಳಿಗೆ ಕೂಡ ಅಸಾಧ್ಯನಾಗಿರುವವನು, ಸಾಂಖ್ಯತತ್ತ್ವದ ರಹಸ್ಯವನ್ನು ತಾಯಿಯಾದ ದೇವಹೂತಿಗೆ ಹೇಳುವ ನೆವದಲ್ಲಿ ಲೋಕಕ್ಕೆ ಅದನ್ನು ಪ್ರಕಟ ಮಾಡಿದವನು, ಮತ್ಸ್ಯಾವತಾರ ಮಾಡಿ ಕಡಲಲ್ಲಿ ಮುಳುಗಿ ವೇದವನ್ನು ಎತ್ತಿ ತಂದವನು, ಸಮುದ್ರಮಥನಕಾಲದಲ್ಲಿ ಆಮೆಯಾಗಿ ಮಂದರದ ಅಡಿ ನೆಲಸಿ ಅದರ ಭಾರವನ್ನು ಹೊತ್ತವನು, ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಪಾತಾಳವನ್ನು ಹೊಗಲಿದ್ದ ಹಿರಣ್ಯಾಕ್ಷನನ್ನು ತರಿದು ಧರೆಯನ್ನು ಆದಿವರಾಹ ರೂಪದಿಂದ ಉದ್ಧರಿಸಿದವನು, ಕಂಬವನ್ನು ಒಡೆದು ನರಸಿಂಹನಾಗಿ ಮೂಡಿ ಹಿರಣ್ಯಕಶಿಪುವನ್ನು ಕೊಂದು ಪ್ರಹ್ಲಾದನನ್ನು ಪೊರೆದವನು, ವಾಮನನಾಗಿ ಬಂದು ಬಲಿಯನ್ನು ಮೂರಡಿ ನೆಲಕ್ಕಾಗಿ ಬೇಡಿ ತ್ರಿವಿಕ್ರಮನಾಗಿ ಬೆಳೆದು ಆ ಬಲಿಯನ್ನು ಪಾತಾಳಕ್ಕೆ ಮೆಟ್ಟಿದವನು, ಕಾರ್ತವೀರ್ಯನನ್ನೂ ರಾಜನ್ಯರನ್ನೂ ಸಂಹರಿಸಿದ ಪರಶುರಾಮನು, ಭಸ್ಮಾಸುರನಿಗೆ ಹೆದರಿ ಓಡುತ್ತಿದ್ದ ಈಶ್ವರನನ್ನು ರಕ್ಷಿಸಿ ಆ ಭಸ್ಮಾಸುರನನ್ನು ಬ್ರಾಹ್ಮಣನಾಗಿ ಕಪಟಪ್ರಬಂಧದಿಂದ ಕೊಂದವನು, ಬ್ರಹ್ಮ ವಿಷ್ಣು ಮಹೇಶ್ವರನಾಗಿ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಕರ್ತ ನಾಗಿರುವವನು, ಸದಾನಂದನು, ಪಾಪದೂರನು, ಅರಿಧ್ವಂಸಕನು, ಇಂದ್ರ ಸುತನು, ಈಶ್ವರಾರ್ಚಿತನು—ಹೀಗೆ ಬಗೆಬಗೆಯಾಗಿ ಶ್ರೀರಾಮನನ್ನು ಮುನಿ ಗಳು ಸ್ತೋತ್ರಗೈಯುತ್ತಾರೆ. ಈ ಸ್ತೋತ್ರಗಂಗಾಲಹರಿಯಲ್ಲಿ ವಾಚಕ ಹೃದಯ ಮುಳುಗಿಹೋಗುತ್ತದೆ, ಕೊಚ್ಚಿಹೋಗುತ್ತದೆ, ತನ್ನನ್ನು ತಾನೇ ಇಲ್ಲಗೈದುಕೊಳ್ಳುತ್ತದೆ.

ಹೀಗೆ ಈ ಕೃತಿಯಲ್ಲಿ, ಈ ರಾಮನಾಮಾಮೃತದ ಬಿಂದಿಗೆಯಲ್ಲಿ ಭಕ್ತಿಯ ಅಮೃತವನ್ನು ಕವಿ ತುಂಬಿದ್ದಾನೆ. ಈ ಮೊದಲು ಬಿಂದಿಗೆಯ ಹೊರಮೈ ಚೆಲುವನ್ನು ಕಂಡಿದ್ದೆವು. ಇದೀಗ ಈ ಬಿಂದಿಗೆಯ ಒಳತಿರುಳಿನ ಸವಿಯನ್ನು ರುಚಿ ನೋಡಿದೆವು. ರಾಮ-ಭರತ, ರಾಮ-ಪುರಜನ, ರಾಮ-ಕೌಸಲ್ಯೆ, ರಾಮ-ಋಷಿಗಣ ಇವರ ಸಂಬಂಧದಲ್ಲಿ ವ್ಯಕ್ತವಾಗುವ ಭಕ್ತಿಯ ಅನೇಕಾನೇಕ ಪರಿಗಳನ್ನು ಕವಿ ಹೃದಯಸ್ಪಂದಿಯಾಗಿ ಚಿತ್ರಿಸಿದ್ದಾನೆ.

## ೩

ಈ ಕಾವ್ಯದಲ್ಲಿ ಕಾಣಬರುವ ವರ್ಣನೆಯ ಚಮತ್ಕಾರ, ಕಲ್ಪನೆಯ ನಾವೀನ್ಯ, ಪಾಂಡಿತ್ಯದ ಬಿಣ್ಪು, ಅಲಂಕಾರದ ಸೊಗಸು, ಶಬ್ದಚಿತ್ರಗಳ ಸ್ವಾರಸ್ಯ, ಉಕ್ತಿವೈಚಿತ್ರ್ಯದ ಕೌಶಲ—ಈ ಮುಂತಾದ ವಿಷಯಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು.

ಮೊದಲು ಇಲ್ಲಿ ಶಬ್ದಾಲಂಕಾರವನ್ನು ಕುರಿತು ಪ್ರಸ್ತಾಪಿಸಿದೆ. ಬಗೆಬಗೆಯ ಪ್ರಾಸಾನುಪ್ರಾಸಾದಿ ಶಬ್ದಾಲಂಕಾರಗಳ ಜೆಡಗನ್ನು ಈ ಕಾವ್ಯದಲ್ಲಿ ಕವಿ ಬಹುಚಮತ್ಕಾರವಾಗಿ ಪ್ರದರ್ಶಿಸಿದ್ದಾನೆ. ಇವು ಕವಿಯ ಬುದ್ಧಿಕೌಶಲವನ್ನು ಉಗ್ಗಡಿಸುವ ವಂದಿಮಾಗಧರಂತೆ ಕೆಲಸ ಮಾಡುತ್ತವೆ. ನಾಂದೀ ಸಂಧಿಯ ೨, ೫, ೭, ಪೀಠಿಕಾ ಸಂಧಿಯ ೧, ಮೂರನೆಯ ಸಂಧಿಯ ೩, ೭, ೮, ೯, ೨೨, ೪೨, ೪೩, ೫೬, ೫೭, ೬೦, ನಾಲ್ಕನೆಯ ಸಂಧಿಯ ೭, ೮, ೧೨, ೨೦, ೩೨, ೩೩, ಐದನೆಯ ಸಂಧಿಯ ೧೫, ೧೬, ೪೯, ೫೯, ೬೩, ೮೦, ೮೧—ಈ ಮುಂತಾದ ಪದ್ಯಗಳಲ್ಲಿ ಕವಿ ತೋರಿಸಿರುವ ಪ್ರಾಸಚಮತ್ಕಾರ ಶ್ಲಾಘನೀಯವಾಗಿದೆ. 'ಬಱಿದೆ ದೂಷಿಸುವ ದೂಷಕಂ ದೋಷಕಂ ಭಾಗಿಯಪ್ಪಂ', 'ಅಡಿಗಡಿಗೆ ಮಡಿಮಡಿದು ಬರ್ಪ ಪೆರ್ದೆರೆಗಳಿಂ ಕಡಲೆಸೆದುದು', 'ರಂಜಿಸಿತು ವಾರಾಶಿ ರಾಶಿರಾಶಿಯನಾಂತಗಗನದಂತೆ', 'ದಶರಥಕುಮಾರಂ ಕುಮಾರಂ ಕುಮಾರಂ ಕುಶಲದೆ ಸಂತಯಿಸೆ ಪೊಱಟುದು ಪುಷ್ಪಕಂ', 'ತಪ್ಪಲೊಳ್ ಕಲ್ಲರಳೆ ಗಿರಿಯುರುಳೆ ತಿರೆಪೊರಳೆ ತೆಪ್ಪ ಬಾನೊಳ್ ಪಾಱೆ ಕಡಲಾಱೆ ನಿಲಲಾಱೆ', 'ತೊಟ್ಟಿಲೊಳ್ ಪುಟ್ಟ ಮಗು ಪಟ್ಟಿರಲ್ ಮುಟ್ಟೆ ಮೈ

ನಿಟ್ಟಿಸುತಮೊಟ್ಟರೆಂಡೊಟ್ಟಿಗನ ನಿಟ್ಟಿವನ ಬಿಟ್ಟು ಪಣೆಗಿಟ್ಟು ಪೊಂಬೊಟ್ಟನ್ ’, ‘ ತಂಗೆಯಂ ಬೈದು ವಿಧಿಯಂ ಜಱಿದು ಭೋಜನಂದೊಱಿದು ವೈಮರೆದು ಮೊರೆದು ’, ‘ ಕೈಯಿತ್ತು ಕುಳ್ಳಿರಿಸಿ ನಲವುಂ ಪಗಲ್ ಪೊಡವಿಯುಂ ಪೊಗೆದು ಬಱಿಯಂ ಬೆಳಗಿ ಬಾಳ್ವಿರೆಂದಜ್ಜೆ ಬಾಯ್ದುಣಿಯೆ ಪರಿಸಿ ’, ‘ ಕುಣಿಕುಣಿದು ದಣಿದಣಿದು ಮಣಿಮಣಿದು ತಣಿತಣಿಪರ್ ಸಮಸ್ತ ಜನರು ’, ‘ ಮಹಾಮಹಿಮ ಮಾಯಾರಮಾರಾಮ ರಾಮನಾಮ ’—ಈ ಮುಂತಾದ ಉದಾಹರಣೆಗಳನ್ನು ನೆನೆದರೆ ಮುದ್ದಣನಿಗೆ ಪ್ರಾಸ ಸಹಜಲೀಲೆ ಎನಿಸುತ್ತದೆ. ಎಷ್ಟು ಅಯತ್ನ ಪೂರ್ವಕವಾಗಿ ಎಷ್ಟು ನಿಸರ್ಗಸುಂದರವಾಗಿ ಕವಿ ಹೀಗೆ ಬರೆಯಬಲ್ಲನು! ಕನ್ನಡಕ್ಕೆ ವಿಶಿಷ್ಟವಾಗಿರುವ ಪ್ರಾಸವನ್ನು ಕಿವಿಗಿಂಪಾಗುವ ರೀತಿಯಲ್ಲಿ ಆಳವಡಿಸಿಕೊಡುವುದರಲ್ಲಿ ಮುದ್ದಣ ಯಾರಿಗೂ ಕಡಿಮೆಯಲ್ಲ.

ಮುದ್ದಣ ಎಂತಹ ಪಂಡಿತಕವಿ ಎನ್ನುವುದು ನಾಂದೀ ಸಂಧಿಯ ಪದ್ಯಗಳಿಂದಲೇ ವ್ಯಕ್ತವಾಗುತ್ತದೆ. ಶ್ಲೇಷಾಲಂಕಾರವನ್ನು ಬಳಸಿಕೊಂಡು ಎರಡೆರಡು ಅರ್ಥ ಬರುವಂತೆಯೂ ಕೆಲವೆಡೆಗಳಲ್ಲಿ ಮೂರುಮೂರು ಅರ್ಥ ಬರುವಂತೆಯೂ ಹೆಣೆದಿರುವ ದೇವತಾಸ್ತುತಿಯ ಪದ್ಯಪುಂಜ ಕವಿಯ ಪಾಂಡಿತ್ಯವನ್ನು ಕಾವ್ಯದ ಪ್ರಾರಂಭದಲ್ಲಿಯೇ ಕೂಗಿ ಸಾರುವ ತುತ್ತೂರಿಯಾಗಿದೆ. ಮುಂದೆ ಸಮುದ್ರ ವರ್ಣನೆಯ ಪದ್ಯಗಳಲ್ಲಿ—ಭವನಂತೆ ಗಿರಿಸುತಾನ್ವಿತನೆನಿಸಿ...., ಮಕರಂದಕಟ ಹರಿಮಿಥುನದಿಂದನಿಮೇಷನಿಕರದಿಂ....., ಇತ್ಯಾದಿ—ಕವಿಯ ಪಾಂಡಿತ್ಯದ ಆಳವನ್ನು ನಾವು ಕಾಣುತ್ತೇವೆ. ಈ ಪಾಂಡಿತ್ಯದ ಇನ್ನೊಂದು ಮುಖ ಕವಿಯ ವೇದಾಂತಜ್ಞಾನಕ್ಕೆ ಸಂಬಂಧಪಟ್ಟದ್ದು. ಋಷಿಗಳು ರಾಮನನ್ನು ಹೊಗಳಿ ಹಾಡುವ ಸಂದರ್ಭದ ಪದ್ಯಗಳನ್ನು ನೆನೆದರೆ ಕವಿಯ ತತ್ತ್ವಜ್ಞಾನದ ಆಳ ಅಗಲಗಳ ಪರಿಚಯ ನಮಗೆ ಆಗುತ್ತದೆ.

ಕಲ್ಪನೆಯ ನಾವೀನ್ಯ ವರ್ಣನೆಯ ಚಮತ್ಕಾರಗಳಿಗೆ ಸಮುದ್ರವರ್ಣನೆಯ ಕೆಲವು ಪದ್ಯಗಳನ್ನೂ ಸೂರ್ಯಾಸ್ತ ಸೂರ್ಯೋದಯಗಳಿಗೆ ಸಂಬಂಧಪಟ್ಟ ಕೆಲವು ಪದ್ಯಗಳನ್ನೂ ನೋಡಬಹುದು. ಅಡಿಗಡಿಗೆ ಮಡಿಮಡಿದು ಬರುವ ಪೆರ್ದೆರೆಗಳನ್ನೂ ಅವುಗಳ ಎಡೆ ಎಡೆಯಲ್ಲಿ ಎದ್ದೆದ್ದು ಉರುಳುವ ಮರಿಮೀನುಗಳನ್ನೂ ಕವಿ ವರ್ಣಿಸಿರುವ ರೀತಿ ಚಮತ್ಕಾರಜನಕವಾಗಿದೆ. ‘ ಹರಹರಾ ಕಾಲಮಿನ್ನೆಂತಹುದೊ ’ಎಂಬ ಪದ್ಯದಲ್ಲಿ ಲೋಕಾನುಭವವನ್ನು ಎಷ್ಟು ಸ್ವಾರಸ್ಯ

ವಾಗಿ ಅಳವಡಿಸಿಕೊಂಡಿದ್ದಾನೆ! ಅಪರ ಮುಂದಣದರಲ್ಲಿ ಕಾಕುತ್ಸ್ಥಾಬ್ಧಿ ದಕ್ಷಿಣಾಬ್ಧಿಗಳಲ್ಲಿ ಅಭೇದಕಲ್ಪನೆ ಮಾಡಿ ವರ್ಣಿಸಿರುವುದು ನವೀನವಾಗಿದೆ. ನೀರು ಎನ್ನುವುದಕ್ಕೆ ಪರ್ಯಾಯ ಪದಗಳಾಗಿರುವ ಅಮೃತ, ವಿಷ, ಪಯ, ಶರ, ಕೀಲಾಲ, ಕುಶ, ರಸ—ಇವುಗಳನ್ನು ಉಪಯೋಗಿಸಿ 'ಸುರರಿಗೆ ಅಮೃತ ಬೇಕೆ? ನನ್ನಲ್ಲಿ ಇನ್ನೂ ಅಮೃತ (ನೀರು) ಇದೆ' ಎಂದು ಮುಂತಾಗಿ ಸಮುದ್ರವನ್ನು ವರ್ಣಿಸಿರುವ ಪದ್ಯ ಚಮತ್ಕಾರ ಪಾಂಡಿತ್ಯಗಳಿಗೆ ನಿದರ್ಶನ ವಾಗಿದೆ. 'ಅಡಿಗಡಿಗೆ ಬರ್ಪ ಬತ್ತೆರೆಗಳೇ ರೋಗಂಗಳು' ಎಂಬ ಪದ್ಯದಲ್ಲಿ ಶರಧಿ ಭವಶರಧಿಯನ್ನು ಪೋಲ್ಗುದು ಎಂದು ಹೇಳುವುದು ತುಂಬ ಚಮತ್ಕಾರದ ಮಾತೇ ಸರಿ. ಶ್ರೀರಾಮನು ಸೀತೆಗೆ ಸಮುದ್ರವನ್ನು ತೋರಿಸುವಾಗ ಕಂಬು ಕಂಧರೆ! ಶಂಖವನ್ನು ನೋಡು, ಚಂದ್ರಬಿಂಬಮುಖಿ! ಚಂದ್ರನಿಂದ ಉಬ್ಬುವ ಅಂಬುನಿಧಿಯನ್ನು ಕಾಣು, ಮೀನಾಕ್ಷಿ! ಮತ್ಸ್ಯಗಳನ್ನು ನೋಡು ಎಂದು ಮುಂತಾಗಿ ಹೇಳಿರುವುದು ಸ್ವಾರಸ್ಯವಾಗಿದೆ. ಸೀತೆಯ ಕೊರಳು ಶಂಖದಂತೆ ಇದೆ. ಶಂಖದಂತೆ ಕೊರಳು ಇರುವವಳು ಶಂಖವನ್ನು ನೋಡಿ ಮೆಚ್ಚಲು ಅರ್ಹಳಾದವಳು ಅವಳಿಗೆ ಶಂಖದ ಪರಿಚಯ ಚೆನ್ನಾಗಿರುತ್ತದೆ ಆದ್ದರಿಂದ ಹೇ ಕಂಬುಕಂಧರೆ! ಶಂಖವನ್ನು ನೋಡು ಎಂದು ಹೇಳಿರುವುದಾಗಿ ಕವಿ ಬರೆದಿದ್ದಾನೆ. ದೂಷಣನ ದುರ್ಮಾರ್ಗದಂತೆ ದಶಕಂಧರನ ರೋಷದಂತೆ.... ವಿಭೀಷಣನ ಭಕ್ತಿಯಂತೆ ಅಡಿಗಡಿಗೆ ಬರ್ಪ ಪೆರ್ದೆರೆಗಳು ಎನ್ನುವುದರಲ್ಲಿ ಉಪಮಾನದ ಔಚಿತ್ಯ ಬೆರಗುಗೊಳಿಸುತ್ತದೆ.

'ವನಂ ಕಂಡಡಗಿದಂತಾಗೆ ಮುಂಬರಿದು ಪುಷ್ಪಕಂ ಬರುತಿರಲ್' ಎನ್ನುವ ಕಡೆ ಆ ವಿಮಾನದ ವೇಗವನ್ನು ಸೂಚಿಸಿರುವ ರೀತಿ ಮನೋಜ್ಞ ವಾಗಿದೆ. ಭೂಮಿಯ ಮೇಲಣ ಅಂದಿನ ಎಡೆಯ ಎಲೆವನೆ ಅರಗಿಳಿಯ ನುಱಿದ ಪಂಜರದಂತೆ, ಜೀವನಂ ತೊಱೆದ ತನುವಂತೆ, ಖಗಣೇಶನಡಗಿರ್ದ ಕಾರಿರುಳಿನಾಗಸದಂತೆ ಇದೆ ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ.

'ತಂಬೆಲರ್ ಸೋಂಕೆ ಬಳ್ಳುವ ಲತಾಂಗಂ ಅದು ಇಱುಸಿಲಂ ಬೇಱಿ ತಡೆದುದುಂಟೆ! ಒಗ್ಗದೊಪಲಂ ಕಂಡೊಡಂ ಬೆರ್ಚುವೇಳಿಗಣ್ ಪರಿವ ಪೆರ್ಬುಲಿನೋಟಮಂ ಸಹಿಸಲುಂಟೆ' ಎಂಬ ಮಾತುಗಳ ಭಾವ ಸೊಗಸಾಗಿದೆ. ಧ್ವನಿ ರಮ್ಯವಾಗಿದೆ. ಹುಲಿಯ ಚರ್ಮವನ್ನು ಕಂಡರೂ ಹೆದರುವ ಜಿಂಕೆಯು

**ಕಣ್ಣಿನವಳು** ಹರಿವ ಹೆಬ್ಬುಲಿಯ ನೋಟವನ್ನು ಸಹಿಸಲುಂಟೆ ಎಂಬ ಮಾತು ಎಷ್ಟು ಮಾರ್ಮಿಕವಾಗಿದೆ!

'ತೋಱ ನೀಂ ದೇವೇಂದ್ರ ರಾಘವೇಂದ್ರನ, ಕರೆದು ತಾರ ಪಾವಕ ವಿಪಿನ ವೈರಿ ಪಾವಕನ' ಎಂಬ ಪದ್ಯದಲ್ಲಿ ಅಷ್ಟದಿಕ್ಪಾಲರನ್ನು ಕುರಿಯುವ ರೀತಿ ವಿನೂತನವಾಗಿದೆ.

'ಕಾಮಿನೀ ಜನಗಳ್ ಕುವರರನೊಡನೆತ್ತಿಕೊಂಡಿರದೆ ಚೆಂಬೊನ್ನ ನೆಲೆವಾಡಮಂ ಸಾರ್ದಿರ್ದರು', 'ನವಿರನೊಳ್ಗೆಯ್ಯ ಜಂತ್ರದಣಿಗೆಯಿನೆತ್ತಿ ಬಾಚಿ ಪೊಱಟಳ್', 'ಬಟಲ್ಮುಡಿಯ ತುಱುಬಿ ಸಣ್ಣ ನಡುವಿಗೆ ಸಡಿಲ್ನಿಱಯೊಟ್ಟೆ', 'ಪೊದ್ದು ದುಗುಲವನು ಉಟ್ಟು ಪೊಸ ಧೋತ್ರಮಂ ಬಣ್ಣಮದ್ದಿದೊಳ್ಪಿಡಿಗೋಲ ಪಿಡಿದು ಸಂಗಡಿಗರೊಡನೆದ್ದು ತೆರಳಿದನೊರ್ವ ಬಾಲಕಂ'— ಈ ಮುಂತಾದ ಮಾತುಗಳಲ್ಲಿ ಎಂತಹ ಸುಂದರವೂ ಸುಸ್ಪಷ್ಟವೂ ಆದ ಒಂದು ಚಿತ್ರ ಮೈವೆತ್ತು ನಿಂತಿದೆ! ಮುದ್ದಣ ಒಳ್ಳೆಯ ಶಬ್ದಶಿಲ್ಪಿ ಎನ್ನುವುದಕ್ಕೆ ಇವು ಸಾಕು ಸಾಕ್ಷಿಗೆ.

ಭರತನ ಕಣ್ಣೆಂಬ ಹೆಣ್ಣುಗಿಳಿಯು ರಾಮನೆಂಬ ಮಾವಿನಮರದಲ್ಲಿ ಮತ್ತೆ ಮತ್ತೆ ಸುತ್ತುತ್ತ ಬುಡವನ್ನು ಹತ್ತಿ ಕಾಲುಗಳೆಂಬ ಕವಲುಗೊಂಬೆಗಳಲ್ಲಿ ನುಗ್ಗಿ ಹೋಗಿ ಮೈಯೆಂಬ ದೊಡ್ಡ ಕೊಂಬೆಯನ್ನು ಹತ್ತಿ ನಗೆಯಿಂದ ಬೆಳಗುವ ಮೊಗವೆಂಬ ಹಣ್ಣಿನಲ್ಲಿ ತನ್ನ ನೋಟವನ್ನು ನಾಟಿತು ಎಂದು ಹೇಳುವ ರೂಪಕ ಭಾವಗರ್ಭಿತವಾಗಿದೆ.

ಪಟ್ಟಾಭಿಷೇಕ ಸಮಯದ ಅಯೋಧ್ಯೆ 'ಶರಣನಭಿಷೇಕ ಸಮಯಕೆ ಸಿಂಗರಂಗೊಂಡ ಲಂಕೆಯಂತೆ' ಇತ್ತಂತೆ. ನೆಲವನ್ನು ಸೋಂಕಿದ ಪುಷ್ಪಕ 'ಮಲಯಜದ ಕಂಪುವೊಱೆಯಾಂತು ನಡೆತರ್ಪ ಮೆಲ್ಲೆಲರಗತಿಯಂತೆವೋಲ್' ಮಂದಗತಿಯಿಂದ ಹರಿಯಿತಂತೆ. ಪಟ್ಟಣವನ್ನು ಪ್ರವೇಶಿಸುತ್ತಿರುವ ರಾಮನನ್ನು ಭರತನು 'ಪಡೆದನಂ ಕಂಡಂತೆ' ನೋಡಿದನಂತೆ. ಕೌಸಲ್ಯೆ ರಾಮನನ್ನು ಕಾಣದೆ 'ಪೂಮುಱಿದ ತಾವರೆವಳ್ಳಿವೋಲ್' ಬಾಡಿದಳಂತೆ; 'ಎಳೆಗಂದಿ ಹಸು ಕಣ್ಮಱೆಯ ಕಱುವನಾರೈವಂತೆ' ಹಂಬಲಿಸುತ್ತಿದ್ದಳಂತೆ. ಸಖಿಯರು ಸೀತೆಗೆ 'ಶೀತಾಂಶುಮಂಡಲಕೆ ಕಱೆಯೆನಲ್' ಕಸ್ತೂರಿಯ ತಿಲಕವನ್ನು ಇಟ್ಟರಂತೆ. 'ರೇವತಿಯರೊಡವರ್ಪ ರೋಹಿಣಿಯಂತೆ' ಸೀತೆ ಸಖಿಯ

ರೊಡನೆ ರಾಜಸಭೆಗೆ ಬಂದಳಂತೆ. ‘ಸಂತಸದ ಸುಗ್ಗಿಗೆ ಕುಕಿಲ್ವ ಕೋಗಿಲೆಯಂತೆ’ ದಂತಿಗಮನೆಯರು ಹಾಡಿದರಂತೆ— ಇಂತಹ ಉಪಮಾನಗಳು ಹೃದ್ಯವಾಗಿವೆ.

ನಾಳೆ ನನ್ನ ವಂಶದ ರಾಯನಾದ ರಾಮನಿಗೆ ಪಟ್ಟವೆಂದು ಆಲೋಚಿಸಿದ್ದಾರೆ. ಆದ್ದರಿಂದ ರಥದಲ್ಲಿ ಆ ವೇಳೆಗೆ ಸರಿಯಾಗಿ ಬಂದು ಸೊಗಸನ್ನು ನೋಡಬೇಕು ಎಂದು ಹೋಗುವಾಗ ಅರಗೀಲು ಕಳಚಿ ಒಂದು ಗಾಲಿ ಸಮುದ್ರದಲ್ಲಿ ಬೀಳಲು ಅದನ್ನು ಹುಡುಕಿ ತರಲು ಕಡಲನ್ನು ಹೊಕ್ಕನೋ ಕಾಣೆ ಎಂಬಂತೆ ಸೂರ್ಯ ಸಮುದ್ರದಲ್ಲಿ ಅದ್ದಿದನಂತೆ. ಈ ಸೂರ್ಯಾಸ್ತದ ವರ್ಣನೆ ರಮ್ಯವಾಗಿದೆ. ಭೃಂಗಾಳಿ ಕಮಲಸಂಕುಲವನ್ನೂ ತಂಗದಿರನು ಆಕಾಶವನ್ನೂ ವಿಹಂಗಸಂದೋಹ ಅವನೀರುಹಂಗಳ ಆಶ್ರಯವನ್ನೂ ಅಸಂಗನು ಅಬ್ಜಾಂಬಕೀಬೃಂದಮನ್ನೂ ಪ್ರವೇಶಿಸಲು ಪಡುಗಡಲಿನಲ್ಲಿ ಪತಂಗನು ಮುಳುಗಿ ಮರೆಯಾದನು. ಆ ದಿಕ್ಕಿನಲ್ಲಿ ಸಂಧ್ಯಾರಾಗವು ಸಂಜೆವೆಣ್ಣು ಮಿಂದುಟ್ಟ ಪೊಸರಂಗು ಸೀರೆಯ ಸೆರಗಿನಂತೆ ಮೆರೆಯಿತು. ಈ ವರ್ಣನೆಯೂ ಚಮತ್ಕಾರಪೂರ್ಣವಾಗಿದೆ.

ಇದೇ ರೀತಿಯಲ್ಲಿ ಸೂರ್ಯನ ಉದಯದ ವರ್ಣನೆಯೂ ಸೊಗಸಾಗಿ ಬಂದಿದೆ. ಉತ್ಸವ ಮೇಳವಿಸಿತು, ಏಳಿ ಏಳಿ ತಾಮಸ ಬೇಡ, ಇಂದ್ರನ ಪಟ್ಟದ ಸೊಗಸಿಗೆ ಏಳು ಮಡಿ ಸೊಗಸಿನ ರಾಮಪಟ್ಟಾಭಿಷೇಕ ನೋಡಬನ್ನಿ ಎಂದು ಲೋಕಾಳಿಯನ್ನು ಕತ್ತೆತ್ತಿ ಹೇಳಿ ಕರೆದಪುದೆನಲು ಕೋಳಿ ಕುಕ್ಕೂ ಎಂದು ಕೂಗಿತಂತೆ. ಮರೆಹೊಕ್ಕ ನನ್ನನ್ನು ಕಾಪಾಡಿದವನು ಎಂದು ರಾಮನನ್ನು ಹೊಗಳಿ ಕಾ ಕಾ ಎಂದು ಬೇಡಿಕೊಳ್ಳುತ್ತಿದೆ ಎನ್ನುವಂತೆ ಕಾಗೆ ಕೂಗಿತಂತೆ. ಖಗಕುಲದ ರಾಯನಿಗೆ ಪಟ್ಟ ಅದರಿಂದ ತಮ್ಮವರಿಗೆ ಹೇಳಿ ಕರೆಯುವುದಕ್ಕಾಗಿ ಆಕಾಶಕ್ಕೆ ಹಾರಿದವು ಎನ್ನುವಂತೆ ಉಳಿದ ಹಕ್ಕಿಗಳು ದೆಸೆದೆಸೆಗೆ ಉಲಿದು ಹಾರಿದವಂತೆ. ಇಲ್ಲಿ ‘ಖಗ’ ಶಬ್ದದ ಪ್ರಯೋಗಸ್ವಾರಸ್ಯ ನೋಡಿ! ಹೊತ್ತಾಯಿತು ಎಂದು ಬೇಗ ಬೇಗ ಒಂದೇ ಗಾಲಿ ಹೂಡಿದ ರಥದಲ್ಲಿ ಕುಳಿತು ಸೂರ್ಯ ಬಂದನಂತೆ.

ಐದನೆಯ ಸಂಧಿಯ ೭, ೮ನೆಯ ಪದ್ಯಗಳಲ್ಲಿ ಕಲ್ಪನೆ ಪಾಂಡಿತ್ಯಗಳು ಮೇಳವಿಸಿ ಮೂಡಿದ ಸುಂದರವೂ ಸ್ವಾರಸ್ಯವೂ ಆದ ಚಿತ್ರ ಒಂದಿದೆ. ಕೈಯೆಂಬ

ಕಮಲವು ಗಲ್ಲವೆಂಬ ಬಾಲಚಂದ್ರನನ್ನು ಸೆರೆಹಿಡಿದಿರುವುದೇಕೆ? ಕಣ್ಣೆಂಬ ನೈದಿಲೆಯು ಕಾಲಿನ ಉಗುರಿನ ಕಿರಣಕಾಂತಿಯನ್ನು ಹಗೆಯೆಂಬಂತೆ ಕಾಣುವುದೇಕೆ? ಶಂಖದಂತಹ ಕೊರಳು ತಾವರೆಯ ದಂಟಿನಂತಿರುವ ನೀಳ್ತೋಳಿನಲ್ಲಿ ಏಕೆ ಒರಗಿರುವುದು? ಸಂಪಗೆಯಂತಹ ಮೂಗು ನಿಟ್ಟುಸಿರ ಬಿಸಿಗೆ ಕೊರಗಿ ಬಾಡಿರುವುದೇಕೆ? ಮುಂಗುರುಳುಗಳೆಂಬ ಸಣ್ಣ ಮೋಡಗಳು ಹಣೆಯೆಂಬ ಆಕಾಶದಲ್ಲಿ ಕವಿದಿರುವುದೇಕೆ? ತಾಳಿ, ನಿಜವನ್ನು ಹೇಳು ಎಂದು ರಾಮನು ಕೈಕೆಯನ್ನು ಕೇಳುತ್ತಾನೆ.

ಸರಸ್ವತಿ ಎಂಬ ಹೆಂಗಸು—ಮಾತು ಎಂಬ ಹೆಣ್ಣು—ಕಸ್ತೂರಿಯ ಕರಡಿಗೆಯಂತಿರುವ ಬಾಯಿ ಎಂಬ ಮನೆಯಲ್ಲಿ ದಾಳಿಂಬೆಯ ಬಿತ್ತುಗಳಂತಿರುವ ಹಲ್ಲುಗಳನ್ನು ಕಾವಲಿರಿಸಿಕೊಂಡು, ತೊಂಡೆಹಣ್ಣಿನಂತೆ ಕೆಂಪಾಗಿರುವ ತುಟಿಯೆಂಬ ತೆರೆಯನ್ನು ಎಲ್ಲಾ ಕಡೆಗೂ ಹಾಕಿಕೊಂಡು, ಮುತ್ತುಗದ ಚಿಗುರಿಲೆಯಂತೆ ತೆಳ್ಳಗೆ ಕೆಂಪಾಗಿರುವ ನಾಲಿಗೆಯೆಂಬ ಮಣೆಯಲ್ಲಿ ಕುಳಿತುಕೊಂಡು ಏನು ಮಾಡುತ್ತಿದಾಳೆ? ತನ್ನ ಗಂಡನ (ಬ್ರಹ್ಮನ) ಸಾನ್ನಿಧ್ಯವನ್ನು ಬಿಟ್ಟು ಬಂದು ನೆಲಸಿರಬೇಕೆಂದು ಒಂದೇ ಮನಸ್ಸಿನಿಂದ ಮೌನವನ್ನು ತಾಳಿ ಈಶ್ವರನನ್ನು ಧ್ಯಾನಿಸುತ್ತಿದಾಳೆ? ಹೀಗೆ ಈ ಮೌನವ್ರತ ಎಷ್ಟು ಹೊತ್ತು ಇರುವುದು? ಎನ್ನುವುದು ಈ ಪದ್ಯದ ಅರ್ಥ. ನೀನು ಏಕೆ ಮಾತನಾಡುವುದಿಲ್ಲ, ಎಷ್ಟು ಹೊತ್ತು ಹೀಗೆ ಸುಮ್ಮನೆ ಇರುವೆ? ಎಂಬುದು ತಾತ್ಪರ್ಯ. ಹಲ್ಲು ದಾಳಿಂಬದ ಬಿತ್ತು, ಮೂಗು ಸಂಪಿಗೆಯ ಮೊಗ್ಗು ಇತ್ಯಾದಿ ವರ್ಣನೆ ಹಳೆಯದೇ. ಆದರೆ ಇಲ್ಲಿ ಕೈಕೆಯ ಬಾಹ್ಯಸೌಂದರ್ಯ, ಅಂತರಂಗದ ದುಮ್ಮಾನದ ತ್ಯಾಗ ಇವೆರಡನ್ನೂ ಈ ರೀತಿ ಮೇಳವಿಸಿ ವರ್ಣಿಸಲು ಈ ಮಾತುಗಳನ್ನು ತಂದಿರುವುದು ಸವ್ಯಾತ್ ಸವ್ಯತರವಾಗಿದೆ. ಪತಿಯೊಡನೆ ಕೋಪಗೊಂಡು ದೂರ ಬಂದು ಕೋಣೆಯೊಳಗೆ ಕುಳಿತು ಮುಸುಕು ಎಳೆದುಕೊಂಡು ತನ್ನ ಗೋಳನ್ನು ನೆನೆದು ಈಶ್ವರಧ್ಯಾನದಲ್ಲಿ ಇರುವ ಹೆಣ್ಣು ಎಂಬಂತೆ ಕೈಕೆಯ ನುಡಿಯನ್ನು (ಬಾಸೆ ಎಂಬ ಪ್ರಯೋಗದ ಸೊಗಸು ನೋಡಿ!) ಉತ್ಪ್ರೇಕ್ಷಿಸಿ ಹೇಳಿರುವುದು ಮೋಹಕವಾಗಿದೆ. ಈ ಮೌನದ ವರ್ಣನೆ ನಮ್ಮನ್ನೂ ಮೂಕಗೊಳಿಸುತ್ತದೆ.

ರಾಮನನ್ನು ಕಂಡ ಭರತ, ಕೌಸಲ್ಯೆ ಕೈಕೆ ಸುಮಿತ್ರೆಯರು, ಪುರಜನರು

ಋಷಿಗಳು ದೇವಾನುದೇವತೆಗಳು ಇವರಿಗಾದ ಆನಂದವರ್ಣನೆಯ ಸ್ವಾರಸ್ಯಾಂಶವನ್ನು ಈ ಹಿಂದೆಯೇ ಸ್ಥಾಲೀಪುಲಕ ನ್ಯಾಯದಂತೆ ಕಾಣಿಸಲಾಗಿದೆ. ಇಲ್ಲಿ ಕವಿಯ ವೇದಾಂತಜ್ಞಾನಕ್ಕೆ ನಿದರ್ಶನವಾಗಿ ಮತ್ತು ಆ ವೇದಾಂತಜ್ಞಾನವನ್ನು ಪ್ರಕಟಪಡಿಸಿರುವ ಉಕ್ತಿಚಾತುರ್ಯದ ನಿದರ್ಶನವಾಗಿ ಇನ್ನೊಂದು ಪದ್ಯವನ್ನು ಸ್ಮರಿಸಿ ಈ ಭಾಗವನ್ನು ಮುಗಿಸಬಹುದು. ಐದನೆಯ ಸಂಧಿಯ ೬೪ನೆಯ ಪದ್ಯವನ್ನು ನೋಡಬೇಕು. ಈ ಪದ್ಯದ ತಾತ್ಪರ್ಯ ಹೀಗಿದೆ: ಒಂದೇ ಒಂದಾದ ಬ್ರಹ್ಮನನ್ನು (ಬ್ರಹ್ಮೈಕ್ಯವನ್ನು) ನಂಬಿ, ಜೀವಾತ್ಮ ಪರಮಾತ್ಮ ರೂಪವಾದ ಆ ಬ್ರಹ್ಮನ ಎರಡು ಸ್ವರೂಪವನ್ನು ಬಿಟ್ಟು (ಭ್ರಮೆಯೆಂದು ತಿಳಿದು) ಆ ಬ್ರಹ್ಮವೇ ಬ್ರಹ್ಮ ವಿಷ್ಣು ಮಹೇಶ್ವರ ಎಂಬ ಮೂರು ಪ್ರಕಾರದಲ್ಲಿ ಇರುವುದೆಂದು ತಿಳಿದು, ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಕಣ್ಣು ಕಿವಿ ಮೂಗು ನಾಲಗೆ ಚರ್ಮಗಳೆಂಬ ಪಂಚೇಂದ್ರಿಯಗಳನ್ನು ಸೇರಿಸಿ (ಈ ಪುರುಷಾರ್ಥಸಂಪಾದನೆಗೆಂದೇ ಇಂದ್ರಿಯಗಳನ್ನು ಹೊಂದಿಸಿ), ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳನ್ನು ಜಯಿಸಿ, ಬೇಟೆ, ಜೂಜು, ಸ್ತ್ರೀಮೋಹ, ಕುಡಿತ, ಕುಣಿತ, ಹಗಲು ನಿದ್ದೆ, ಸೋಮಾರಿಯ ಅಲೆತ ಎಂಬ ಈ ಏಳು ಕೆಟ್ಟ ವ್ಯಾಪಾರಗಳನ್ನು ತ್ಯಜಿಸಿ, ಅನ್ನ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ ಎಂಬ ಎಂಟು ಮದಗಳನ್ನು ದೂರೀಕರಿಸಿ ಎದೆಯೊಳಗಣ ಆಕಾಶದಲ್ಲಿ ಬಿಂದುರೂಪಿಯಾದ ಪರಮಾತ್ಮನನ್ನು ಧ್ಯಾನಿಸಿ, ಶಂಖ ಚಕ್ರ ಮತ್ತು ಹನ್ನೆರಡು ಊರ್ಧ್ವ ಪುಂಡ್ರಗಳ ಧಾರಣೆ, ಹರಿಯ ನಾಮಸ್ಮರಣೆ ನಾಮಸಂಕೀರ್ತನೆ, ಪಾದತೀರ್ಥ ಪ್ರಾಶನ, ಪ್ರಸಾದ ಸೇವನ, ಏಕಾದಶೀ ಉಪವಾಸ, ತುಳಸೀ ಅರ್ಚನ, ಸ್ವಾಮಿಯ ಭಕ್ತರಿಗೆ ಭೋಜನ ಮಾಡಿಸುವಿಕೆ ಈ ತೆರನಾದ ಒಂಬತ್ತು ವಿಧವಾದ ಭಕ್ತಿಯಿಂದ ಪರಮಾತ್ಮನ ಸೇವೆಮಾಡಿ ಸೀಮಾತೀತನಾದ ಜ್ಞಾನಜ್ಯೋತಿಯನ್ನು ಆನಂದಾತಿಶಯದಿಂದ ಕೂಡಿದ ಒಳ್ಳೆಯ ಗುಣಗಳನ್ನು ಹೊಂದಿದ ಋಷಿವರರು ಸ್ತೋತ್ರ ಮಾಡಿದರು. ಎಂತಹ ಅಮೂಲ್ಯವಾದ ವೇದಾಂತದ ಗಹನ ತತ್ತ್ವವನ್ನು ಎಷ್ಟು ಚಮತ್ಕಾರವಾಗಿ ೦, ೧, ೨, ೩, ೪, ೫, ೬, ೭, ೮ ಮತ್ತು ೯ ಈ ಸಂಖ್ಯೆಗಳನ್ನು ಉಪಯೋಗಿಸಿಕೊಂಡು ಹೇಳಿದ್ದಾನೆ. ಇದೊಂದು ರೀತಿಯ ಶಬ್ದಚಿತ್ರ. ಕವಿಯ ಪಾಂಡಿತ್ಯಕ್ಕೆ ಇದು ಇನ್ನೊಂದು ಉದಾಹರಣೆ.

೪

ಈ ಕವಿಯ ಕಾವ್ಯದಲ್ಲಿ ಅಲ್ಲಲ್ಲಿ ಅನ್ಯಕವಿಗಳ ಛಾಯೆ ಬಿದ್ದಿರುವ ಅಂಶವನ್ನು ಈ ಸಂದರ್ಭದಲ್ಲಿ ಗಮನಿಸಬೇಕು.

(೧) ಕುಡಿದಂ ಕುಂಭಜನೆನ್ನನಾತ್ಮಪಥುವೊಳ್ ಕೂಡಿರ್ದನೆಂದಿಂದಿರಂ
ಕಡೆದಂ ತನ್ನಹಿತಾದ್ರಿಗಾಂ ಶರಣಮೆಂದಾ ರಾಘವಂ ಕಟ್ಟಿ ಮೇಣ್
ತಡೆದಂ ಕಾಯ್ದೊಳಕೆಯ್ದಿನೆಂದು ಪಗೆಯಂ ಹಾಲಾಹಲಂ ಕೊಟ್ಟೊಡಂ
ಮೃಡನೊರ್ವಂ ಮುಳಿಯಂ ಗಡೆಂದುಲಿವವೋಲುದ್ಘೋಷಿಕುಂ ಸಾಗರಂ

ಎಂಬ ಷಡಕ್ಷರ ಕವಿಯ ಶಬರಶಂಕರ ವಿಲಾಸದ ಪದ್ಯಕ್ಕೂ,

ಕೊಡನಣುಗನರಸಿಗಿಂಬಿತ್ತೆನಾದೊಡಮವಂ
ಕುಡಿದನಂದಳಿಯನೀ ರಾಘವಂ....

ಎಂಬ ಮುದ್ದಣನ ಮೂರನೆಯ ಸಂಧಿಯ ಹತ್ತೊಂಬತ್ತನೆಯ ಪದ್ಯಕ್ಕೂ ಇರುವ ಸಾಮ್ಯವನ್ನು ಸುಲಭವಾಗಿ ಗುರುತಿಸಬಹುದು.

(೨) ಮಂದಃ ಕವಿಯಶಃ ಪ್ರಾರ್ಥೀ ಗಮಿಷ್ಯಾಮುಪಹಾಸ್ಯತಾಂ
ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ

ಎಂಬ ಕಾಳಿದಾಸನ ರಘುವಂಶದ ಮೊದಲನೆಯ ಸರ್ಗದ ಮೂರನೆಯ ಪದ್ಯಕ್ಕೂ

ತೊಟ್ಟತುದಿ ಮರನೊಳಿಹ ಪಣ್ಣಿಗುಪಿ ಬಾಯ್ವಿಟ್ಟು
ಮುಟ್ಟಿ ಕೊಯ್ವಪೆನೆಂಬ ಭ್ರಾಂತಿಯಿಂ ಕೆಯ್ನಿಳ್ಕಿ
ದಿಟ್ಟಿಸುತ ನೆಗೆಯಲುಜ್ಜುಗಿಪ ವಾಮನನಂತೆ....

ಎಂಬ ಮುದ್ದಣನ ಈ ಕಾವ್ಯದ ಎರಡನೆಯ ಸಂಧಿಯ ನಾಲ್ಕನೆಯ ಪದ್ಯಕ್ಕೂ ಇರುವ ಸಾಮ್ಯವಾದರೂ ಸ್ಪಷ್ಟವಾಗಿಯೇ ಇದೆ.

(೩) ಗತಂ ತಿರಶ್ಚೀನಮನೂರು ಸಾರಥೇಃ ಪ್ರಸಿದ್ಧಮೂರ್ಧ್ವಜ್ವಲನಂ ಹವಿರ್ಭುಜಃ
ಪತತ್ಯಧೋಧಾಮವಿಸಾರಿ ಸರ್ವತಃ ಕಿಮೇತದಿತ್ಯಾಕುಲಮೀಕ್ಷಿತಂ ಜನೈಃ

ಎಂಬ ಮಾಘನ ಶಿಶುಪಾಲವಧದ ಮೊದಲನೆಯ ಸರ್ಗದ ಎರಡನೆಯ ಪದ್ಯಕ್ಕೂ

ಬಿಸುಗದಿರನಾಗೆ ತಿರ್ಯಕ್‌ಚರಂ ಮೇಣ್ ವಿಭಾ
ವಸುವಾಗಲೂರ್ಧ್ವಜ್ವಲನ ತೋರ್ಪ ಪೊಳಪಿದೆ
ಣ್ದೆಸೆಗೆ ಮುಸಗಿರ್ಪುದೆತ್ತಣಿನೆಂದು....

ಎಂಬ ಈ ಕಾವ್ಯದ ನಾಲ್ಕನೆಯ ಸಂಧಿಯ ಇಪ್ಪತ್ತುಮೂರನೆಯ ಪದ್ಯಕ್ಕೂ ಇರುವ ಸಾಮ್ಯವೂ ಸುಸ್ಪಷ್ಟವೇ.

(೪) ಕಡೆದೊಡೆ ಪಾಲ್ಗಡಲ್ ವಿವಿಧ ವಸ್ತುವನೀಯದೆ ತೇಯೆ ಚಂದನಂ
ಕುಡದೆ ಸುಗಂಧಮಂ ಪಿಳಿಯೆ ಕರ್ಬಿನಿದಾಗದೆ ಕಾಸೆ ಕಾಂಚನಂ
ಪಡೆಯದೆ ಕಾಂತಿಯಂ ನಿಜದಿನೊಳ್ಪಿದರಪ್ಪರೆಂತು ಬಾಧೆವ
ಟ್ಟೊಡಮುಪಕಾರಮಂ ಪೆರರ್ಗೆ ಮಾಡದೆ ಬಾಧೆಯನೇಕೆ ಮಾಡುವರ್

ಎಂಬ ಈ ಅಭಿನವಪಂಪ(ನಾಗಚಂದ್ರ)ನ ಪಂಪರಾಮಾಯಣದ ಪದ್ಯಕ್ಕೂ

ಪಡೆಯೆ ಪಾಲ್ಗಡಲನಮೃತಂ ಪುಟ್ಟುವಂತೆ ತೇ
ದೊಡೆ ಚಂದನಂ ಸುಗಂಧವನೀವ ತೆರದೆ ಪುಟ
ಕಿಡೆ ಕಾಂಚನಂ ಕಾಂತಿ ಪೆರ್ಚುವೊಲ್....

ಎಂಬ ಈ ಕೃತಿಯ ಮೂರನೆಯ ಸಂಧಿಯ ಒಂಬತ್ತನೆಯ ಪದ್ಯಕ್ಕೂ ಇರುವ ಸಾಮ್ಯವೂ ಎಂತಹವನಿಗಾದರೂ ಹೊಳೆಯದೆ ಹೋಗುವುದೆ?

(೫) ಪರಿಪತತಿ ಪಯೋನಿಧೌ ಪತಂಗಃ ಸರಸಿರುಹಾಮುದರೇಷು ಮತ್ತಭೃಂಗಃ
ಉಪವನ ತರುಕೋಟರೇ ವಿಹಂಗಃ ಯುವತಿಜನೇಷು ಶನೈಃಶನೈರನಂಗಃ

ಸಂಧ್ಯಾಕಾಲವನ್ನು ವರ್ಣಿಸುವ ಈ ಶ್ಲೋಕ ಹೇಗೆ ಮಾರ್ದನಿಗೊಟ್ಟಿದೆ ಮುದ್ದಣನ ಈ ಪದ್ಯದಲ್ಲಿ!

ಭೃಂಗಾಳಿ ಕಮಲಸಂಕುಲಮನಾಕಾರಮುಂ
ತಂಗದಿರನವನೀರುಹಂಗಳಾಶ್ರಯಮುಂ ವಿ
ಹಂಗಸಂದೋಹಮಬ್ಜಾಂಬಕೀ ವೃಂದ ಮುನನಂಗಂ ಪ್ರವೇಶಿಸಲ್ಕೆ
ಪಿಂಗಿ ಪಡುಗಡಲೊಳಡ್ಡಂ ಪೋದನತ್ತಲ್ ಪ
ತಂಗನ್.... ೫.೩೨

(೬) ಆದೌ ರಾಮ ತಪೋವನಾಭಿಗಮನಂ ಹತ್ವಾ ಮೃಗಃಕಾಂಚನಂ
ವೈದೇಹೀ ಹರಣಂ ಜಟಾಯುಮರಣಂ ಸುಗ್ರೀವಸಂಭಾಷಣಂ
ವಾಲೀನಿಗ್ರಹಣಂ ಸಮುದ್ರತರಣಂ ಲಂಕಾಪುರೀದಾಹನಂ
ಪಶ್ಚಾದ್ರಾವಣ ಕುಂಭಕರ್ಣಮಥನಂ ಏತದ್ಧಿ ರಾಮಾಯಣಂ

ಎಂಬ ಈ ಸಂಸ್ಕೃತ ಶ್ಲೋಕದ ತಮ್ಮನಂತೆ ಇದೆ. ಈ ೫ನೆಯ ಸಂಧಿಯ ಇಪ್ಪತ್ತೊಂದನೆಯ ಪದ್ಯ :

ಕಿತ್ತಡಿಯ ಜನ್ನಮುಂ ಕಾದು ಪೆಣ್ಗೈದಡಿಯಿ
ನೊತ್ತಿ ಕಲ್ಲಂ ಹರನ ಬಿಲ್ಮುರ್‍ದುದು....

ಸಮುದ್ರವನ್ನು ವಿರೋಧಾಭಾಸ ಶ್ಲೇಷಾದಿ ಅಲಂಕಾರಗಳಿಂದ ವರ್ಣಿಸುವ ಸಂದರ್ಭದಲ್ಲಿಯೂ ಪುರಸ್ತ್ರೀಯರು ರಾಮನ ಆಗಮನವಾರ್ತೆ ಕೇಳಿ ನೋಡಲು ಹೊರಟ ಸಂದರ್ಭದಲ್ಲಿ ಉಡುಗೆ ತೊಡುಗೆ ನಗನಾಣ್ಯಗಳನ್ನು ಒಂದಕ್ಕೆ ಬದಲು ಒಂದನ್ನು, ಒಂದರ ಸ್ಥಾನದಲ್ಲಿ ಒಂದನ್ನು, ಇಟ್ಟು ತೊಟ್ಟು ಬಂದರು ಎಂದು ಹೇಳುವ ಸಡಗರದ ವರ್ಣನೆಯ ಸಂದರ್ಭದಲ್ಲಿಯೂ ರಾಮನ ಪಟ್ಟಾಭಿಷೇಕದ ಸಂದರ್ಭದಲ್ಲಿ ಅರಮನೆಯ ಮತ್ತು ನಗರದ ಶೃಂಗಾರವನ್ನು ವರ್ಣಿಸುವ ಸಂದರ್ಭದಲ್ಲಿಯೂ ಒಡ್ಡೋಲಗದ ವೈಭವವನ್ನು ವರ್ಣಿಸುವ ಸಂದರ್ಭದಲ್ಲಿಯೂ ಈ ಕವಿ ಹಳೆಯ ಜಾಡಿನಲ್ಲಿಯೇ ನಡೆದಿದ್ದಾನೆ. ಪೂರ್ವ ಕವಿಗಳ ವರ್ಣನೆಗಳಿಗೆ ಋಣಿಯಾಗಿದ್ದಾನೆ. ಈತ ಈ ಕಾವ್ಯವ್ಯಾಪಾರಗಳಿಗೆಲ್ಲ ಹಿಂದಿನ ಕವಿವರ್ತಕರ ಮಳಿಗೆಯಿಂದ ಸಾಮಾನುಗಳನ್ನು ಕಡ ತಂದಿದ್ದಾನೆ. ಹಿಂದಿನ ಪಂಡಿತಕವಿಸಾಹುಕಾರರಿಂದ ಹಣವನ್ನು ಸಾಲವಾಗಿ ಪಡೆದಿದ್ದಾನೆ. ಹಳಗನ್ನಡದ ಸಾಹಿತ್ಯದ ಪರಿಚಯುವಿರುವವರು ಈ ತೆರನಾದ ಕಡ ತಂದ ವಿವರಗಳನ್ನು ಸುಲಭವಾಗಿ ಎತ್ತಿಡಬಹುದು. ಬಕ ಮರ್ಕಟ ಅಜ ಮೂಷಕ ಪಿಪೀಲಿಕ ಶುನಕ ಚಿತ್ರಿಕ ಮರುಳ ವಿದೂಷಕ ವರ್ತಕ ಇತ್ಯಾದಿ ಜೀವಿಗಳ ಗುಣವಿಶೇಷಗಳನ್ನು ಉಳ್ಳವನೇ ಒಳ್ಳೆಯ ಕವಿ ಎಂದು ಮುದ್ದಣ ಪೀಠಿಕೆಯಲ್ಲಿ ಹೇಳಿಬಿಟ್ಟಿದ್ದಾನೆ.

೫

ಮುದ್ದಣನ ಹಿರಿಮೆ ಇಂತಹ ಕಡೆಗಳಲ್ಲಿ ಇದೆ ಎಂದು ನಾವು ಹೇಳುವುದಿಲ್ಲ. ಅವನ ಹಿರಿಮೆ ಇರುವುದು ಭಾವದ ವಿಸ್ತಾರವಾದ ಪ್ರತಿಪಾದನೆಯಲ್ಲಿ, ಭಕ್ತಿಯ ಬಗೆಬಗೆಯ ಆರ್ದ್ರವಾದ ಅನುಭವವಿಶೇಷಗಳನ್ನು ಬಿಡಿಬಿಡಿಯಾಗಿ ವಿವರವಿವರವಾಗಿ ಬಿಡಿಸಿಡುವುದರಲ್ಲಿ, ಅಂತಹ ಸಂದರ್ಭದಲ್ಲಿ ಹೊಂದಿಸಿಕೊಡುವ ಶಬ್ದಚಿತ್ರಗಳಲ್ಲಿ. ಕಥೆಯ ವಸ್ತು ತೀರ ಸ್ವಲ್ಪವೇ ಸ್ವಲ್ಪವಾಗಿರುವಾಗ ಭಾವ

ಪ್ರದರ್ಶನಗಳ ವರ್ಣನೆಗಳನ್ನು ಜೋಡಿಸಿ ಒಂದು ಷಟ್ಪದೀ ಕಾವ್ಯವನ್ನು ನೆಯ್ದಿರುವುದರಲ್ಲಿ ಅವನ ಜಾಣ್ಮೆಯಿದೆ. ಲಂಕೆಯಲ್ಲಿ ರಾವಣಾದಿಗಳನ್ನು ಕೊಂದು ವಿಭೀಷಣನಿಗೆ ಪಟ್ಟಗಟ್ಟಿದ ಶ್ರೀರಾಮನು ಸೀತೆ ಲಕ್ಷ್ಮಣ ವಿಭೀಷಣ ಹನುಮಂತ ಸುಗ್ರೀವಾದಿಗಳೊಡನೆ ಪುಷ್ಪಕವೇರಿ ನಡೆದು ತನ್ನ ಆಗಮನವನ್ನೇ ನಿರೀಕ್ಷಿಸುತ್ತ ನಂದಿಗ್ರಾಮದಲ್ಲಿ ಅಸು ತೊರೆಯುವುದರಲ್ಲಿದ್ದ ಭರತನ ಬಳಿಗೆ ಬಂದು ಬಳಿಕ ಎಲ್ಲರೊಡನೆ ಅಯೋಧ್ಯೆಯನ್ನು ಪ್ರವೇಶಿಸಿ ಅಲ್ಲಿ ಪಟ್ಟಾಭಿಷಿಕ್ತನಾಗಿ ಓಲಗಕೊಡುವನು. ಒಂದು ವಾಕ್ಯದಲ್ಲಿ ಹೇಳಬಹುದಾದ ಈ ಕಥೆಯನ್ನು ೨೫೦ ಪದ್ಯಗಳಲ್ಲಿ ಹೇಳಿ ಭಾವವ್ಯಂಜನೆಗೆ ಅವಕಾಶವನ್ನು ಕಲ್ಪಿಸಿಕೊಂಡಿರುವ ಕವಿ ಪ್ರಶಂಸೆಗೆ ಅರ್ಹನಾದವನೇ ಸರಿ. ಈ ಕಾವ್ಯದಲ್ಲಿ ಪ್ರೌಢಿಮೆಯೂ ಇದೆ ಸರಳತೆಯೂ ಇದೆ, ಚಮತ್ಕಾರವೂ ಇದೆ ರಸಿಕತೆಯೂ ಇದೆ, ಸಂಪ್ರದಾಯದ ದಾಸ್ಯವೂ ಇದೆ ನೂತನ ಮಾರ್ಗಾನ್ವೇಷಿಯ ಸ್ವಾತಂತ್ರ್ಯವೂ ಇದೆ. ಈ ಎಲ್ಲ ಗುಣಗಳೂ ಇರುವುದೂ ಸಂಧಿಕಾಲದ ಕವಿಯೊಬ್ಬನಲ್ಲಿ ಅನಿವಾರ್ಯವಾದದ್ದೇ ಸರಿ. ಹಳತು ಹೊಸತರ ಹೊಸಿಲ ಮೇಲೆ ನಿಂತಿರುವ ಕವಿ ಈ ಕಾವ್ಯವನ್ನು ಹೇಳಿದಾನೆ ಎನ್ನುವುದನ್ನು ನಾವು ನೆನಪಿನಲ್ಲಿಟ್ಟುಕೊಂಡರೆ ಇದನ್ನು ಹೀಗೆ ಏಕೆ ಹೇಳಿದ್ದಾನೆ ಎನ್ನುವುದು ಅರ್ಥವಾಗುತ್ತದೆ. ಶ್ರೀರಾಮನಭ್ಯುದಯಚಾರಿತ್ರವನ್ನು ಷಟ್ಪದೀಕಾವ್ಯವಾಗಿ ಪ್ರಾರಂಭಿಸಿ ಪಟ್ಟಾಭಿಷೇಕದ ಸನ್ನಿವೇಶವನ್ನು ವರ್ಣಿಸುವವರೆಗೂ ಹಳೆಯ ಕಾವ್ಯಮಂದಿರದ ಹೊಸಿಲ ಮೇಲೆಯೇ ನಿಂತ ಕವಿ ಬೀದಿಗಿಳಿದು ಮತ್ತೊಂದು ನವ್ಯ ಮಾರ್ಗದಲ್ಲಿ ನಡೆದು ಹೊಚ್ಚ ಹೊಸ ಕಾವ್ಯಮಂದಿರದ ನಿರ್ಮಾಣಕ್ಕೆ ತೊಡಗುತ್ತಾನೆ. ‘ ಪದ್ಯಂ ವಧ್ಯಂ, ಗದ್ಯಂ ಹೃದ್ಯಂ ; ಹೃದ್ಯಮಪ್ಪ ಗದ್ಯದೊಳೆ ಪೇಳ್ವುದು ’ ಎಂದು ಕೈಯೆತ್ತಿ ಘೋಷಿಸುತ್ತಾನೆ. ಪರಿಣಾಮವಾಗಿ ಪಟ್ಟಾಭಿಷೇಕಾನಂತರದ ಆ ಮುಂದಣ ರಾಮಾಶ್ವಮೇಧದ ಕಥೆ ಹಳಗನ್ನಡ ಗದ್ಯದ ಹೊಸ ಕಾದಂಬರೀ ತಂತ್ರದ ಮುದ್ದಣ–ಮನೋರಮೆಯರ ಸರಸ ಸಂವಾದದ ಸುಂದರ ಕಾವ್ಯವಾಗಿ ರೂಪುಗೊಳ್ಳುತ್ತದೆ. ಅದ್ಭುತರಾಮಾಯಣ, ರಾಮಪಟ್ಟಾಭಿಷೇಕ, ರಾಮಾಶ್ವಮೇಧಗಳನ್ನು ಚಿತ್ರಿಸಿದ ಕವಿ ರಾಮನಾಮಸಂಕೀರ್ತನದಿಂದ ಚರಿತಾರ್ಥನಾಗುತ್ತಾನೆ. **ಇಂತಹ ಕವಿಯೂ ಧನ್ಯ! ಇಂತಹ ಕವಿಯನ್ನು ಪಡೆದ ನಾಡೂ ಧನ್ಯ.**

ಮುದ್ದಣಕವಿ ರಾಮಪಟ್ಟಾಭಿಷೇಕವನ್ನು ಬರೆಯುವಾಗ ಪದ್ಮಪುರಾಣದ ನಾಲ್ಕನೆಯ ಖಂಡವಾದ ಪಾತಾಳಖಂಡದ ಮೊದಲನೆಯ ಐದು ಅಧ್ಯಾಯಗಳನ್ನೂ ವಾಲ್ಮೀಕಿ ರಾಮಾಯಣದ ಯುದ್ಧಕಾಂಡದ ಕೊನೆಯ ಆರು ಸರ್ಗಗಳನ್ನೂ (೧೨೬--೧೩೧) ಓದಿಕೊಂಡಿರಬೇಕೆನ್ನಿಸುತ್ತದೆ. ಜೊತೆಗೆ ಕಾಳಿದಾಸನ ರಘುವಂಶದ ಹದಿಮೂರನೆಯ ಸರ್ಗವನ್ನು ನೋಡಿದ್ದರೂ ನೋಡಿರಬಹುದು. ಇದರ ಮೇಲೆ ರಾಮಪಟ್ಟಾಭಿಷೇಕಕ್ಕೆ ಸಂಬಂಧಪಟ್ಟ ಬೇರೆ ಬೇರೆ ಸಾಹಿತ್ಯ ಕೃತಿಗಳು ಯಾವುದಾದರೂ ತನ್ನ ಕೈಗೆ ಸಿಕ್ಕಿದರೆ ಅದರ ಪ್ರಯೋಜನವನ್ನೂ ಪಡೆದಿರಬಹುದು. ಆದರೆ ಈ ಯಾವ ಆಕರಗಳನ್ನೂ ಮುದ್ದಣ ಅನುಸರಿಸಿ ಅನುವಾದ ಮಾಡಿರುವುದು ಕಾಣಬರುವುದಿಲ್ಲ. ಆತನು ಪಟ್ಟಾಭಿಷೇಕ ಕಾವ್ಯದಲ್ಲಿ ವಾಲ್ಮೀಕಿ ಕಾಳಿದಾಸರ ಪ್ರಭಾವಕ್ಕೆ ಯಾವ ರೀತಿಯಲ್ಲಿಯೂ ಒಳಗಾಗಿಲ್ಲ. ಪದ್ಮಪುರಾಣವನ್ನೇನೋ ಓದಿ ಓದಿ ಅದರ ಶ್ಲೋಕಗಳನ್ನು ಮೆಲುಕಾಡಿ ಮೆಲುಕಾಡಿ ಈ ಕೃತಿರಚನೆಗೆ ತೊಡಗಿದ್ದಾನೆ ಎನ್ನಬೇಕಾಗುತ್ತದೆ. ಏಕೆಂದರೆ ಪದ್ಮಪುರಾಣದ ನೆರಳು ಪಟ್ಟಾಭಿಷೇಕ ಕಾವ್ಯದ ಮೇಲೆ ಅಲ್ಲಲ್ಲಿ ಬಿದ್ದಿರುವುದು ಕಾಣಬರುತ್ತದೆ. ಆದರೆ ಒಂದು ಮಾತು : ಅದ್ಭುತರಾಮಾಯಣದಲ್ಲಿ ಸಂಸ್ಕೃತದ ಆ ಮೂಲ ಶ್ಲೋಕಗಳನ್ನು ಅನುಸರಿಸಿದ ಹಾಗೆ ಇಲ್ಲಿ ಏನೂ ಅನುಸರಿಸಿಲ್ಲ. ಸಂಪೂರ್ಣವಾಗಿ ಸ್ವತಂತ್ರವಾಗಿದೆ ಈ ಕಾವ್ಯ. ಗಂಧದ ನೀರು ತುಂಬಿದ ಪಾತ್ರೆ ನೀರು ಸುರುವಿದ ಮೇಲೂ ಹೇಗೆ ಅದರ ವಾಸನೆಯಿಂದ ಆವೃತವಾಗಿರುತ್ತದೆಯೋ ಹಾಗೆ ಇವನ ಮನಸ್ಸು ಪುರಾಣದ ಶ್ಲೋಕಗಳ ವಾಸನೆಯಿಂದ ಪೂರ್ಣಗೊಂಡಿತ್ತು. ಆ ಪುರಾಣವನ್ನು ಒತ್ತಟ್ಟಿಗಿರಿಸಿ ಕಾವ್ಯರಚನೆಗೆ ತೊಡಗಿದಾಗಲೂ ಆ ಪುರಾಣದ ಕಂಪು ಮರೆಯಾಗದೆ ಮನಸ್ಸಿನಲ್ಲಿ ಉಳಿದಿದ್ದಿತು. ಇದರ ಫಲವಾಗಿ ಕಾವ್ಯದಲ್ಲಿ ಆ ಮೂಲದ ಸಂಸ್ಕಾರ ಒಂದಿಸಿತು ಬೆರೆಯಿತು. ಇದಕ್ಕೆ ಎರಡೋ ಮೂರೋ ಉದಾಹರಣೆಗಳನ್ನು ಕೊಡಬಹುದು : 'ತಥಾಪಿ ಚ ಮಯಾ ತುಭ್ಯಂ ವಕ್ತವ್ಯಂ ಸ್ವೀಯಶಕ್ತಿತಃ', 'ಅರಿಸಾದೊಡೆ ಸಾಧ್ಯಮಪ್ಪನಿತು ಪೇೞ್ವೆ', 'ಯತ್ತೇ ವಿದೇಹಜಾ ಪಾಣಿಸ್ಪರ್ಶಂ ಸುಖತರಮಮನ್ಯತ ಸ ಏವ ಚರಣೌ ರಾಮ ವನೇ ಬಭ್ರಾಮ ಮತ್ಕೃತೇ', 'ಪಡದಿ ಮೆದುಗೈಯೊತ್ತುವಡಿ ನಡೆಯೆ ಕಲ್ಲೊತ್ತಿದೆಡೆ', 'ಯೇ ಪುತ್ರಾ ಮಾತಾಪಿತ್ರೋರ್ಹಿ ನ ಶುಶ್ರೂಷಾ ಸಮುತ್ಸುಕಾಃ । ತೇ ಮಂತವ್ಯಾ ನರಾ ಮಾತಃ ಕೀಟಕಾರೇತಸೋ

ಭವಾಃ', 'ಅಬ್ಬೆಯುಂ ಸೇವಿಸದ ತನುಜನಿನ್ನವಂ ಸುತನಲ್ಲಮಂತು ರೇತೋಜಾತ ಕೀಟಂ ವಲಂ', 'ಶರೀರೇ ರೋಮಹರ್ಷೋಽಭೂದ್ಗದ್ಗದಾ ವಾಗಭೂತ್ತದಾ ಹರ್ಷಾಶ್ರೂಣಿ ಚ ಸೋಽಷ್ಣಾಸಿ ಪ್ರಣಾಮಂ ಪಾತ್ರಪುರಾಪದಂ' ಎಂಬಂತಹ ಒಂದು ಶ್ಲೋಕದ ಭಾವವನ್ನು ಕವಿ ಎರಡು ಮೂರು ಪದ್ಯಗಳಲ್ಲಿ ಹೃದಯಸ್ಪಂದಿಯಾಗುವಂತೆ ವರ್ಣಿಸಿಕೊಂಡು ಹೋಗಿದ್ದಾನೆ. ಹೀಗೆಯೇ 'ಅಯೋಧ್ಯಾಂ ಪ್ರವಿವೇಶಾಥ ಕೃತಕೌತುಕತೋರಣಾಂ । ಹೃಷ್ಟಪುಷ್ಟಜನಾಕೀರ್ಣಾಮುತ್ಸವೈಃ ಪರಿಭೂಷಿತಾಂ ॥' ಈ ಒಂದು ಶ್ಲೋಕದ ಭಾವವನ್ನು ಹೇಗೆ ಹಿಗ್ಗಲಿಸಿ ಹಿಗ್ಗಲಿಸಿ ಕವಿ ಹಾಡಿದ್ದಾನೆ! ವಾಚಕರು ಸಂಸ್ಕೃತ ಪುರಾಣವನ್ನೂ ಕನ್ನಡ ಕಾವ್ಯವನ್ನೂ ಹತ್ತಿರ ಹತ್ತಿರ ಇಟ್ಟು ನೋಡಿದಾಗ ಇಂತಹದೇ ಇನ್ನೂ ಹಲವು ನಿದರ್ಶನಗಳನ್ನು ನೋಡಬಹುದು. ಇಲ್ಲಿ ಹೇಳಬೇಕೆಂದಿರುವುದು ಇಷ್ಟೇ: ಈ ಕವಿ ಪುರಾಣವನ್ನೇನೂ ಹೆಜ್ಜೆಹೆಜ್ಜೆಗೂ ಅನುಸರಿಸಿಲ್ಲ. ಆದರೆ ಅದರ ವಾಸನೆಯ ಸಂಸ್ಕಾರ ಕಾವ್ಯದಲ್ಲಿ ಕಾಣಬರುತ್ತದೆ. ಇದು ಅನಿವಾರ್ಯ. ವಾಲ್ಮೀಕಿ, ವ್ಯಾಸ, ಕಾಳಿದಾಸರ ಅಮೃತವಾಣಿಯನ್ನು ಯಥಾಮತಿಯಾಗಿ ಆಸ್ವಾದಿಸಿ ಹೃದಯಕ್ಕೆ ಸಂಸ್ಕಾರವನ್ನು ಪಡೆದುಕೊಂಡು ಸ್ವತಂತ್ರವೂ ಭಾವಪೂರ್ಣವೂ ಆದ ಈ ಕೃತಿಯನ್ನು ಕವಿ ನಮಗೆ ಕೊಟ್ಟಿದ್ದಾನೆ. ಈ ಹಿಂದೆಯೇ ಹೇಳಿದಂತೆ ಇಲ್ಲಿ ಮುಖ್ಯವಾಗಿ ಕವಿಯ ಗಮನವಿರುವುದು ಭಕ್ತಿಯ ಭಾವವನ್ನು ಚಿತ್ರಿಸುವುದರ ಕಡೆಗೆ. ಅದನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾನೆ. 'ಭಕ್ತಿ ವೈರಾಗ್ಯಗಳ ಸತ್ಕಥೆ'ಯಾಗಿ 'ರಾಮನಾಮಾಮೃತದ ಬಿಂದಿಗೆ'ಯಾಗಿ ಈ ಕೃತಿ ಎಲ್ಲ ಕನ್ನಡಿಗರ ಗೌರವಾದರಗಳಿಗೆ ಎಂದೆಂದಿಗೂ ಪಾತ್ರವಾಗಿರುತ್ತದೆ.

# ಶ್ರೀರಾಮಪಟ್ಟಾಭಿಷೇಕಂ

## ನಾಂದೀಸಂಧಿ

ಶ್ರೀಮದಚಲಾತ್ಮಜಾನನಕೈರವಾಬ್ಜಂ ನಿ ।
ರಾಮಯಂ ದಿವ್ಯಕೇಶಂ ರಾಜಶೇಖರಂ ।
ಸಾಮಗಾನಪ್ರಿಯಂ ಹರಿಸುತಾಹಿತನಹೀನಾಲಂಕೃತಾಂಗಂ ಶಿವಂ ॥
ಕಾಮಮುಖ್ಯಾರಿವರ್ಗಧ್ವಂಸಿ ಭೂತಪತಿ ।
ಭೀಮವಿಕ್ರಮಿ ಪುಣ್ಯಜನವಂದಿತಂ ಸದಾ ।
ರಾಮನೊಲಿದೀಗೆಮಗೆ ಕಾಮಿತಾರ್ಥಂಗಳಂ ಮಂಗಳಂ ಗೋತ್ರೇಶ್ವರಂ ॥ ೧ ॥

ರಾಗಮಣಿರುಚಿರಾಜಿತೋತ್ತಮಾಂಗಂ ಸುಪು ।
ನ್ನಾಗಾಚ್ಛಪುಂಡರೀಕಾಕಲಿತಪದನಮಿತ ।
ಭೋಗಯೋಗ್ಯಾಶ್ರಯಂ ಭುವನಗರ್ಭಂ ವಂಶಶೋಭಿತಂ ಹೈಮಕಟಕಂ ॥
ರಾಗರಸಯುತನಮಲಘನರೂಪನಚಲಂ ಸು ।
ರಾಗಮೋನ್ಮಿಲಿತಪ್ರದೇಶನನಿಶಂ ನಿರ್ಜ ।
ರಾಗರನೊಡರ್ಚುಗೆಮ್ಮಖಿಳರ ಮನೋಭೀಷ್ಟಮಂ ಕೂರ್ಮೆಯಿಂ ಭೂಧರಂ ॥ ೨ ॥

ಮಲವಿನಾಶಂ ಬಾಡಬಾಶ್ರಯಂ ಸತ್ತ್ವಸಂ ।
ಕುಲಯುಕ್ತನಧಿಕಗುಣಗಂಭೀರನನಿಮಿಷಾ ।
ಕಲಿತಾನ್ತರಂಗಂ ಸದಾಹಿಮಕರಾಂಕಲಾವಣ್ಯಪ್ರಭಾವಸ್ಥಿತಂ ॥
ಚಲದಭ್ರಗಂಗಾನ್ವಿತಂ ಸ್ವೈರನಭವನಿ ।
ಸ್ತುಲಿತಶುಭ್ರಾನಂತಮಣಿಶೋಭಿತಂ ಭೂತ ।
ಕುಲಜಾತನಾಥವಾಸಾಸ್ಪದಂ ಮಾಳ್ಕೆಮಗೆ ಶ್ರೀಯುಮಂ ಶ್ರೀಶಂಕರಂ ॥ ೩ ॥

ಚಂಚಲಾಯತನೇತ್ರೆ ಕಪಿಮುಖಸ್ತುತಿಪಾತ್ರೆ |
ಪಂಚಮಸುವಾಣಿ ಫಣಿವೇಣಿ ಕಲ್ಯಾಣಿ ದೇ |
ವಾಂಚಿತಪದಾಬ್ಜಾತೆ ಗೋತ್ರಾತ್ಮಜಾತೆ ವಿಖ್ಯಾತೆ ಲೋಕೈಕಮಾತೆ ||
ಚಂಚಲಾಲಕಿ ರಾಜವದನೆ ಗುಣಗಣಸದನೆ |
ಪಂಚಾಸ್ಯಮಧ್ಯೈಯಕ್ಷರವಿದ್ಯೈ ನಿರವದ್ಯೈ |
ವಾಂಛಿತವನೀ ಮಾನಿನೀ ಮಾನಿಪಂತೆನ್ನ ಕಬ್ಬಮೊಂದುಂ ಧರೆಯೊಳು || ೪ ||

ದ್ರಾವಕಂ ವಿನತಾತ್ಮಬಂಧ್ವಸಚ್ಚರಿತನಿ |
ದ್ರಾರ್ವಕಂ ನಾಗಾವೃತಾಂಗಂ ದಯಾಸಮು |
ದ್ರಾವಕರಕಂ ದೀರ್ಘನಾಸಿಕನಮೋಘಂ ಸುವರ್ಣಪಕ್ಷಪ್ರಭಾವಂ ||
ಭಾವರಹಿತಂ ಬುಧಜನೌಘವಂದಿತಪದನ |
ಭಾವಜನ್ಮಂ ವಿನಾಯಕನೆಮ್ಮನಾವಗಂ |
ಭಾವಶುದ್ಧಿಯನಿತ್ತು ಕೃತಿಗೆ ನಿರ್ವಿಘ್ನತೆಯನೆಸಗಿ ತಾನೊಲಿದು ಪೊರೆಗೆ || ೫ ||

ಯತಿಗಣಾಶ್ರಯಮೆನಿಸಿ ಶಬ್ದಾರ್ಥಭಾವದಿಂ |
ದತಿರಸಾಲಂಕಾರಮೊಪ್ಪೆ ಜೀವಾಕ್ಷರಸು |
ಗತಿಗಿರ್ಕೆಯಾಗಿ ನವಪದಪುಂಜರಂಜಿತಮನೋಜ್ಞಮೆನೆ ಕೈವಲ್ಯದ ||
ನುತಸುಕೃತಪದ್ಯಾವಳಿಯೆ ಇದೆನಿಸುತ್ತೆ ವಸು |
ಮತಿಗೆ ವಿಬುಧರ್ಕಳಿಂ ಸಂಭಾವ್ಯಮಾಗೆ ಭಾ |
ರತಿಯೊಲಿದಜಸ್ರಮೆನಗಿಷ್ಟಾರ್ಥಮಿತ್ತು ತಾನಿರ್ಕೆ ಮಜ್ಜಿಹ್ವಾಗ್ರದಿ || ೬ ||

ನಮುಚಿಸೂದನನಿಂಗೆ ಸಖನಾಗಿ ಪ್ರೇಮದಿಂ |
ನಮುಚಿಸೂದನಮುಖ್ಯದಿವಿಜರ್ಕಳಂ ಪೊರೆದ |
ನಮುಚಿತದೆ ಲೋಕೇಶನೆನಿಪ ವಿಧಿಯಂ ಸುಗುಣನಿಧಿಯಂ ಸದಾ ಧ್ಯಾನಿಸಿ ||
ಕಮಲದೆಲೆಯೊಳ್ ಮಲಗಿ ಪಕ್ಕೆಯನಡರ್ದು ನಿಜ ||
ಕಮಲೆಯೊಡನನುದಿನಂ ಮೆಱೆದಿರ್ಪ ಭಕ್ತಹೃ |
ತ್ಕಮಲಾಸನಂಗೆ ಭವವಾರಿನಿಧಿತಾರಕಬ್ರಹ್ಮಂಗೆ ಮಣಿವೆನೆಂದು || ೭ ||

ಮಾರಹರನಂಶವೆನಲಂಬಿಕಾತ್ಮಜನಾಗಿ |
ವಾರಿಧಿಯನುತ್ತರಿಸಿ ಲಂಕೆಯಂ ಪೊಕ್ಕು ಪರ |
ನಾರಿಯಂ ಬಯಸಿದಸುರನ ಗರ್ವಮಂ ಮುಱಿದು ಕಾಲಾದಿಖಳರ ಮಡುಹಿ ||
ವೀರಸೇನಾನಿಕರಮೆಸೆವ ಪೊೞಲುರಿಪಿ ತಾಂ |
ಸಾರುತೀಶಂಗೆಱಗಿದರಿಭಯಂಕರತಾರ |
ಕಾರಿ ಮಿಗೆ ಮಾೞ್ಕೆಮಗೆ ಶ್ರೀಶೈವಸಂಪದವನನುದಿನಂ ಕೂರ್ಮೆವೆತ್ತು || ೮ ||

ಮಿಗೆ ಮಾಧವಗೆ ಮಿತ್ರನಾದೆ ವೈದೋಱದೀ |
ಜಗದೊಳೆಲ್ಲೆಲ್ಲಿಯುಂ ಚರಿಸಿ ಭೂಭೃದ್ವರರ |
ಪಗೆಗೊಂಡು ಸಂಹರಿಸಿ ಶೇಷರಾಜರಿಗಹಿತನಾಗಿ ಜಸವಡೆದೆ ಬಱಿಕ ||
ಸೊಗಸಿನಿಂ ಪ್ರಮದಾಳಿಗನುಚರನೆನಿಸಿ ಜನರ |
ಬಗೆಬಗೆಯ ಕಾಮಿತವ ಪೂರೈಸುತಿಹ ಸಮಾ |
ಶುಗನೆಯೆನ್ನಂ ಪೊರೆಯುವೇೞ್ಕೆಂಗು ಬೇಡುತಿಹೆ ನೀಂ ಸದಾಗತಿಯಹುದೆಲ್ಲೈ || ೯ ||

---

# ಪೀಠಿಕಾಸಂಧಿ

ಹರಿಗೆಱಗಿ ಸೋಮನಂ ನುತಿಸುತೆ ಮನಂದಣಿಯೆ |
ಹರಿವಾಹನನ ಬಲಂಗೊಂಡು ಹರಿಪುತ್ರರಂ |
ಹರಿಸುತಾದ್ಯರ್ಗೆ ತಲೆವಾಗಿ ಗುರುಕವಿಬುಧರ ಪದಕಮಲಮಂ ಧ್ಯಾನಿಸಿ ||
ಹರಿಗೆಱಗಿ ಸೋಮನಂ ನುತಿಸುತೆ ಮನಂದಣಿಯೆ |
ಹರಿವಾಹನನ ಬಲಂಗೊಂಡು ಹರಿಪುತ್ರರಂ |
ಹರಿಸುತಾದ್ಯರ್ಗೆ ತಲೆವಾಗಿ ಗುರುಕವಿಬುಧರ ಪದಕಮಲಮಂ ಧ್ಯಾನಿಪೆಂ || ೧ ||

ಪೆತ್ತಯ್ಯನಯ್ಯನಿಂದನುದಿನದೊಳುಪ್ಪನ್ನ |
ವಿತ್ತು ಪೊರೆದವನಯ್ಯನಿಂದಾತನಿಂದಮಾ |
ಪತ್ತಿಗೊದವಿದ ಭಟಂ ಪಿತನನ್ನದಾತನಾಪದ್ಬಾಂಧವಾದ್ಯರಿಂದೆ ||
ಉತ್ತಮೋತ್ತಮನು ಗುರುವಿಂತೆಂಬರೆನಗೆ ಧರೆ |
ಯತ್ತಣಿಂದೋರೊರ್ವರೊಂದೊಂದನುಪದೇಶಿ |
ಸುತ್ತ ಬಗೆಬಗೆಯ ಭಾವನೆಯಿತ್ತರನಿಬರೆಲ್ಲರ್ ಗುರುಗಳಿಂದೆಱಗುವೆಂ || ೨ ||

ವ್ಯಾಸ ವಾಲ್ಮೀಕಿ ಜೈಮಿನಿ ಪಿಂಗಳಾಖ್ಯರಂ |
ಲೇಸಿನಭಿನಮಿಸಿ ಭವಭೂತಿ ಶೂದ್ರಕ ಕಾಳಿ |
ದಾಸ ಬಾಣಾದಿ ಸಕ್ಕದ ಕಬ್ಬಿಗರ ನೆನೆದು ಕರ್ಣಾಟಕವಿಗಳೆನಿಪ ||
ಭೂಸುರೋತ್ತಮ ಚಂದ್ರಭಟ್ಟ ಕೇಶವ ನಂದಿ |
ವಾಸುದೇವಾಚ್ಯುತ ಷಡಕ್ಷರಿ ದಿಗಂಬರವಿ |
ಲಾಸ ಕವಿರುದ್ರ ವೇಂಕಟ ಕೃಷ್ಣರಭಿಮತವನನುಸರಿಸುತುಸಿರ್ವೆನಿದನು || ೩ ||

ತೊಟ್ಟ ತುದಿಮರನೊಳಿಹ ಪಣ್ಣಿಗುಱಿ ಬಾಯ್ವಿಟ್ಟು |
ಮುಟ್ಟಿ ಕೊಯ್ದಪೆನೆಂಬ ಭ್ರಾಂತಿಯಿಂ ಕೈನಿಳ್ಕಿ |
ದಿಟ್ಟಸುತ ನೆಗೆಯಲುಜ್ಜುಗಿಪ ವಾಮನನಂತೆ ಕವಿತಾಸುಲಕ್ಷಣಗಳ ||
ಗುಟ್ಟನಱಿಯದೆ ಕಷ್ಟಸಾಧ್ಯವಹ ಕೃತಿಗೆ ಮನ |
ಗೊಟ್ಟಳಿಂದೆನ್ನ ನಗೆಗೀಡುಮಾಡದೆ ಜಗದಿ |
ಪುಟ್ಟಿದವರಿಗೆ ಮನದ ಬಯಕೆ ಪಿರಿದೆಂದು ಮನ್ನಿಪುದಿದಂ ಸರ್ವಜನರು || ೪ ||

ಅಂಬಿಗನ ಪಟವಾತನೋದಿದೊಡೆ ಬೞಿಕ ಬಿಯು |
ದಂ ಬರೆದ ಕಬ್ಬಮಂ ಪಠಿಸಿದೊಡೆ ಬರ್ಕುಮೆ ಕು |
ಱುಂಬನ ಬಯಲ್ನುಡಿಯನಱಿತೊಡೆ ಸುಪಾಂಡಿತ್ಯಮಿಂತೆನಲ್ಕೆನ್ನ ಕಾವ್ಯಂ ||
ಇಂಬಾಗದೆಂದುಮಭಿನವಕಾವ್ಯಕರಕೃತಿಗಿ |
ದೆಂಬುದೇನಾಶ್ಚರ್ಯಮನ್ಯಪ್ರಬಂಧಗಳ |
ಹಂಬಲಱಿಯೆನು ದೈವಮಲ್ಲದೆನಗಿಲ್ಲ ದಿವ್ಯಜ್ಞಾನಸದ್ಬೋಧಕಂ || ೫ ||

ನಿಂದಿಸುವ ಜನರ ದುರ್ವಾಕ್ಯಮಂ ಕೇಳ್ದು ಮನ |
ಗುಂದಿ ಮಾಣ್ಬನೆ ಕಾವ್ಯರಚನೆಯಂ ಕವಿ ಗುಮ್ಮ |
ನಂದುದಿಪ ನೇಸಱಿಂ ಕಂಡು ದನಿಗುಡಲರ್ಕನೇಂ ಕಿರಣಮುಡಗಿಸುವನೇ ||
ಪೊಂದದತಿವರ್ಣಮೆಸೆದಿರ್ದೊಡಮಲಂಕಾರ |
ದಿಂದೆ ಶೋಭಿಸದೊಡಂ ರಾಮನಾಮಾಮೃತದ |
ಬಿಂದಿಗೆಯಿದೆನೆ ಬಱಿದೆ ದೂಷಿಸುವ ದೂಷಕಂ ದೋಷಕಂ ಭಾಗಿಯಪ್ಪಂ ||೬||

ಮೃದುಪದಾನ್ವಿತೆ ಮಂದಗತಿ ಮಂಜುಭಾಷೆ ಭಾ |
ಸ್ವದಮಲಿನಸಂಧಿಶೋಭಿತೆ ವರ್ಣಯುಕ್ತೆ ಷ |
ಟ್ಪದವೇಣಿ ನವರಸಭರಿತೆ ಸಚ್ಚರಿತೆ ಸುನಯನಾತಿಕಠಿನಸ್ವಭಾವೆ ||
ಚದುರೆ ಕನ್ನಡಜಾಣೆ ಸತ್ಕಳಾಕೋವಿದರ |
ಹೃದಯಮಂ ತೋಷಿಸುವಳೆನೆ ರಸವಿಹೀನರಿಂ |
ಗೊದಗುವಳೆ ದೈವಗತಿಯಿಂದೊರ್ವ ಲಭಿಸಿದೊಡಮೇಂಗೆಯ್ವರಾಗಾಂಪರು
|| ೭ ||

ಕನ್ನಡಿತಿಯೊರೆದ ನುಡಿಯೆಂದಿದಂ ಭಾವಿಸದೆ |
ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದು |
ಕನ್ನಡಿಗನೇಕ ಪೆಸರಿರ್ದೊಡೇನಕ್ಕು ಫಲಮೆಸೆವ ಮೊಗಗಾಣ್ಬುದಲ್ತೆ ||
ಚೆನ್ನನೊರ್ವಂ ಮರುಳನಾದೊಡೇಂ ವಿತ್ತಸಂ |
ಪನ್ನೆ ತಾಂ ಬಂಜೆಯೆನಿಸಿರ್ದೊಡೇಂ ಕನ್ನಡದೊ |
ಳಿನ್ನ ಕಬ್ಬಂ ಬರೆಯೆವೊಟ್ಟೊಡೇಂ ಭಕ್ತಿವೈರಾಗ್ಯಸತ್ಕಥೆಗಳೆಸೆಯೆ || ೮ ||

ಮೂಲವಟುಸದೆ ವೃದ್ಧಿಯನೆ ಬಹುಪದಾರ್ಥಕನು |
ಕೂಲಮಂ ಗೆಯ್ದು ಖುಣಶೇಷಗಳ ಭೇದಿಸುತೆ |
ಕಾಲಕರ್ಮಗಳ ಬಿಡದನುಸರಿಸಿ ನಿತ್ಯಕರ್ತೃ ಕ್ರಿಯೆ ವಿಭಕ್ತಿಗಳೊಳು ||
ಮೇಲೆನಿಸಿ ಸತ್ಕೃತಿಯೆಸಗೆ ಮಾನ್ಯನಹನಂತೆ |
ಪೋಲೆಸೆಯೆ ಮೃದುವಚನಚಯದಿಂದೆ ಸಂತತಂ |
ಮೇಲದಱೊಳೇಕವಚನಕ್ರಮವ ಪಿಡಿದರಲ್ಕವನ ಮತಿ ವಿಸ್ತರಿಪುದು || ೯ ||

ಬಕನ ಗುಣವೊಂದು ಮರ್ಕಟನದೊಂದಜನ ಮೂ |
ಷಕನ ಲಕ್ಷಣಗಳೊಳಗೊಂದೊಂದು ಮೇಣ್ ಪಿಪೀ |
ಲಿಕನ ಶುನಕನ ಮಾನಸೌಕಸನ ಚಿತ್ರಕಾಯನ ಗುಣಗಳೊಳಗದೊಂದು ||
ಪಿಕನ ಚಿತ್ರಿಕನ ಮರುಳನ ವಿದೂಷಕನ ವ |
ರ್ತಕನ ಸಲ್ಲಕ್ಷಣಗಳೊಂದೆರಡಱಿಂದೆಸೆಯು
ಲಕಳಂಕಕೀರ್ತಿಯಿಂದೊಪ್ಪಿರ್ಪನಾಕವಿಯೆ ಲೋಕಮಿರ್ಪನ್ನೆವರೆಗಂ || ೧೦ ||

ಬುಧರೆಲ್ಲರೊಲ್ದು ಕೈಕೊಳ್ಗೆ ತಿದ್ದುಗೆ ಕೃತಿಯೊ |
ಳಧಿಕದೋಷಂಗಳೇನಾನುಮುಳ್ಳೊಡೆ ಕಥಾ |
ಸುಧೆಯನೀಂಟುಗೆ ಭಕ್ತವೃಂದಮಭಿಮಾನಿಗಳ್ ಮನ್ನಿಸುತ್ತಿರ್ಕೆ ನಿಚ್ಚಂ ||
ಅಧಿನಾಥರೆಂತುಮಾಶ್ರಯಮನಿತ್ತೆಸಗೆ ನವ |
ಮಧುರರಸಝುರಿಯ ರಸಿಕರ್ ಶೋಧಿಸುತ್ತಿರ್ಕೆ |
ವಿಧುಪುರದ ಲಕ್ಷ್ಮೀಮನೋಹರಂ ಕಬ್ಬಿಗರ ಕುಲಮಂ ಪೊರೆಗೆ ಸಂತತಂ ||೧೧||

---

## ಮೂರನೆಯ ಸಂಧಿ

ಸೂಚನೆ || ಶೇಷಮಿಲ್ಲೆನೆ ರಾಮಚಂದ್ರನ ಪಟ್ಟದ ವಿ |
ಶೇಷದಿತಿಹಾಸಮಂ ವಾತ್ಸ್ಯಾಯನಂಗಾದಿ |
ಶೇಷನಷ್ಟಾಹಿಕುಲಪೋಷನಪರಿಮಿತಸಂತೋಷದಿಂದೊರೆದನಂದು ||

ನ್ಯಸ್ತಮಾನಸನಾಗಿ ಸತ್ಕಥಾಕೌತುಕವ |
ವಿಸ್ತರಿಪರಾರೆಂದು ಚಿಂತಿಸುತ ನಡೆದು ನಾ |
ಗಸ್ತೋಮಮಧ್ಯದೊಳು ರಂಜಿಪ ಮಹಾಶೇಷನಂ ಕಂಡು ದೈನ್ಯಮೆಸೆಯೆ ||
ಮಸ್ತಕವನಿಳುಹಿ ಬೆಸಗೊಂಡನಾತನೊಳಾದಿ |
ವಸ್ತು ರಘುವರನ ಮೂರ್ಧಾಭಿಷೇಚನಸ |
ಮಸ್ತಚಾರಿತ್ರಮಂ ಪೇಳ್ದು ತನ್ನಂ ಪೊರೆಯಬೇಕೆಂದು ವಾತ್ಸ್ಯಾಯನಂ || ೧ ||

ಪೊತ್ತೆ ಭೂತಳಮಂ ಪರೋಪಕಾರಾರ್ಥದಿಂ |
ದಿತ್ತೆ ವಿಷ್ಣುವಿಗೊಡಲ ತಲ್ಪಮೆನೆ ಧರ್ಮಕೆಲೆ |
ಸುತ್ತಿಕೊಂಡೈ ಮಂದರಾದ್ರಿಯಂ ಪ್ರಗ್ರಹದೊಲಮರರೇನಿತ್ತರೆನಗೆ ||
ಚಿತ್ತಶುದ್ಧಿಯ ಗೆಯ್ದು ರಾಮಚಾರಿತ್ರಮಂ |
ಬಿತ್ತರಿಸಿ ಪೊರೆದೊಡಾಗದೆ ಪೇಟೆನಲ್ಕೆ ಜಟಿ |
ಕುತ್ತಮಾಂಗವನೆತ್ತಿ ಕುಳ್ಳಿರಿಸಿ ಮೆಯ್ದಡವಿ ನಾಗೇಂದ್ರನಿಂತೆಂದನು || ೨ ||

ಉಪಚಾರಮೇಕೆಮಗೆ ವಾತ್ಸ್ಯಾಯನನೆ ಕಥೆಯ |
ನುಪದೇಶಗೆಯ್ದೊಡದು ಸುಕೃತಮಂತಲ್ಲದಿದ |
ನುಪಕಾರಮೆಂದು ಬಗೆಯಲ್ಬಹುದೆ ನಿನಗನುಭವಂ ತನಗೆ ತೋಷಮಹುದು ||
ಉಪಲಬ್ಧಮಕ್ಕು ಸುಜ್ಞಾನಗಿರಿಶಿಖರಮಿ |
ನ್ನುಪಜೀವನಂ ತಾಪಸೌಘಕೆನೆ ಶಂಕೆಯೆಂ |
ಬುಪರಾಗಮಂ ಕಳೆದು ಚಿದ್ಭಾನುಕಿರಣಮಂ ಪ್ರಸರಿಪುದು ರಾಮಚರಿತಂ || ೩ ||

ಕಡೆಯೆ ಪಾಲ್ಗಡಲನವೃತಂ ಪುಟ್ಟುವಂತೆ ತೇ |
ದೊಡೆ ಚಂದನಂ ಸುಗಂಧಮನೀವ ತೆಱದೆ ಪುಟ |
ಕಿಡೆ ಕಾಂಚನಂ ಕಾಂತಿ ಪೆರ್ಚುವೊಲ್ ಕರ್ಬುಗೋಲಂ ಪಿೞಿದು ಕಾಸಲೊಡನೆ||
ಗುಡಮೆನಿಸುತಧಿಕಮಧುರಂಗುಡುವ ಪರಿಯೊಳಿಡೆ |
ಬಿಡದೆ ಶ್ರೀರಾಮಚರಿತಾವೃತವ ಮಥಿಸಲ್ಕೆ |
ಪಡೆವೆವೆಲೆ ಸುಜ್ಞಾನಪಿಂಡಮಂ ಖಂಡಮಂ ಸವಿಯಲೆನಿತಿನಿದೊ ಬೞಿಕ ||೪||

ಆಲಸ್ಯಮಿಲ್ಲಮೆನಗುತ್ಸವಂ ಪೊಱಿತು ಶ್ರೀ |
ಲೋಲನಭ್ಯುದಯಚಾರಿತ್ರಮಂ ವರ್ಣಿಸಲ್ |
ಸಾಲದೀನಾಲಗೆಗಳೆಂಬುದೊಂದೇ ಚಂಚಲಂ ಮನದೊಳಲ್ಲದಿನ್ನು ||
ಆಲಿಸಾದೊಡೆ ಸಾಧ್ಯಮಪ್ಪನಿತು ಪೇೞ್ವೆ ನರ |
ಲೀಲೆಯಿಂ ಖಳರ ಸೈಮಿಸಿಗಟ್ಟಿ ವಿಧಿ ದೇವ |
ಪಾಲಾದಿಸುರರ ರಕ್ಷಿಸಿದ ಗಡ ಹರಿಗೆನಿತು ಕರುಣಮೋ ತನ್ನವರೊಳು ||೫||

ರಾವಣಾದ್ಯರ್ ಮಡಿಯೆ ಪೌರಜನಮೆಯ್ದೆ ಸಂ |
ಭಾವಿಸಲ್ ಶರಣಂಗೆ ರಾಜ್ಯಪದಮಂ ಶಶಿವಿ |
ಭಾವಸುಗಳಿರ್ಪನಕ ನೆಲೆಗೊಳಿಸಿ ಪಟ್ಟಾಭಿಷೇಕಮಂ ವಿರಚಿಸಿದನು ||
ದೇವದುಂದುಭಿ ಮೊೞಗೆ ಸೋಗೆಗಣ್ಣಬಲೆಯರ್ |
ಭಾವದಿಂ ನಲಿಯೆ ಪೂಮೞೆಗಱೆಯೆ ಬೞಿಕ ಸು |
ಗ್ರೀವಜಾಂಬವಮುಖ್ಯರುಲಿದರೆಣೆಗಾಣೆವೀರಾಘವನ ವಚನಕೆಂದು ||೬||

ಶಶಿಧರಾನನೆಯನಂಗೀಕರಿಸುತೊಡನೆ ಕುಲಿ |
ಶಶರೀರನಂ ಮುಂತೆ ಪುರಕಟ್ಟೆ ವಾನರೇ |
ಶ ಶತಬಲಿ ನೀಲ ನಳ ಜಾಂಬವ ಸುಶೇಣ ಮುಖ್ಯರ್ ಕೂಡಿ ಸಾಲ್ಗೊಂಡಿರೆ ||
ದಶರಥಾತ್ಮಜನರಸಿಯೊಡನೆ ಪುಷ್ಪಕಮಂ ತ್ರಿ |
ದಶರ ನುತಿಗೊಂಡೇಱೆ ಮಣಿರಥದ ಮೌಕ್ತಿಕಮ |
ದಶನಿಯೊಳಶನಿಗೋಪದೊಳ್ಮಸಗೆ ರಂಜಿಸಿತು ನಾಯಕರ ಮಕುಟಂಗಳ
||೭||

ಭಾನುರಥಮಲ್ಲಮೆಣೆಗಾಲಿ ತೋರ್ಕುಂ ಚಿತ್ರ ।
ಭಾನುರಥಮಲ್ಲ ಶುಕ್ಲಧ್ವಜಂ ಕಾಣ್ಗುಮತಿ ।
ಭಾನುವಿಂ ಬೆಳಗುತಿಹುದೆತ್ತಣದೊ ಪುಷ್ಪಕಂ ಚೋದ್ಯಮಿದು ನೋಟಕರ್ಗೆ ॥
ಮಾನಕಸದಳಮೆನಲ್ ಪೊಱಮಟ್ಟು ಬೞಿಕ ಪವ ।
ಮಾನಗತಿಯಿಂ ಮುಂದೆ ಶಕ್ರವಿಧಿಮುಖ್ಯರ ವಿ ।
ಮಾನಂಗಳೊಡನೆ ಬರಲಿತ್ತ ತೆಂಗಡಲಧಿಕಘೋಷದಿಂ ಕಣ್ಗೊಳಿಸಿತು ॥ ೮ ॥

ತಪ್ಪನೆಸಗಿದೆ ಪಿಂದೆ ಜಡಭರಿತನಾಗಿ ಮುಂ ।
ತಪ್ಪ ನರನಾಟಕದ ಲೀಲೆಯಂ ಬಗೆಯದೈ ।
ತಪ್ಪ ರಾಘವನೊಳೆಂತಾದೊಡಂ ಕ್ಷಮಿಸಿ ತನ್ನಂ ಕಾದ ಕರುಣಿಯೆಂದು ॥
ದಪ್ಪದೆರೆಗೈಗಳಿಂ ಮೇಣೊರ್ಮೆ ಕೂರ್ಮೆಯಿಂ ।
ದಪ್ಪಲೈದುವನೊ ಕಡಲೊಡೆಯನೆಂಬೊಲ್ ಮೀರೆ ।
ದಪ್ಪದಿರದಡಿಗಡಿಗೆ ಮಡಿಮಡಿದು ಬರ್ಪ ಪೆರ್ದೆರೆಗಳಿಂ ಕಡಲೆಸೆದುದು ॥ ೯ ॥

ಪಗೆಗಗ್ರಜರ ದೂಱಲನಿಮಿಷರ್ ನಿನ್ನೊಳೀ ।
ಬಗೆಯಱಿತು ಖೂಳರಂ ಮಡುಹಿ ನಂಬಿದವರ್ಗೆ ।
ಸೊಗಮಿತ್ತೆ ನಾವುಮನಿಮಿಷರೆಮ್ಮನಗ್ರಜರ್ ದ್ವೇಷಿಸಲ್ ಸುಮ್ಮನಕಟಾ ॥
ಬಗಿದು ವೈರಿಗಳನೆಮ್ಮಂ ಕಾವುದಿನ್ನು ನಂ ।
ಬುಗೆ ಪೆಱರೊಳಿಲ್ಲಮೆಂದೊರೆಯೆ ರಾಘವಗೆ ಮೀ ।
ಲ್ನೆಗೆದಪುವೊ ಕಾಣೆನೆನೆ ಮಱಿಮೀನ್ಗಳೆಡೆಯೆಡೆಯೊಳೆದ್ದುರುಳ್ದಪುವೆಲ್ಲಿಯುಂ
॥ ೧೦ ॥

ಮಿಕ್ಕು ಧರ್ಮವನುಯ್ದು ಸೀತೆಯಂ ದೇವರೊಳ್ ।
ಸೊಕ್ಕಿ ನಡೆದೞಿದ ದಶಕಂಧರಂ ಮೇಣ್ ಪೊೞಲೊ ।
ಳೊಕ್ಕಲಿರಬಹುದೆ ದುರ್ಯಶಮಪ್ಪುದೆನಗಿದಂ ಪಾೞೆಸಗಿ ಬಿಡುವೆನೆಂದು ॥
ಉಕ್ಕಿ ಮೊಱೆದೈತರ್ಪ ಶರಧಿ ತನಗೀಕಾರ್ಯ ।
ತಕ್ಕುದಲ್ಲರರೆ ರಾಘವನಾಜ್ಞೆ ಪಿರಿದು ಮಱೆ ।
ವೊಕ್ಕವಂಗಿತ್ತನೆಂದೞಿದಳ್ಕಿ ಮರಳುವೋಲಬ್ಧಿ ತಡಿವೊಡೆದು ಪೋಕುಂ ॥ ೧೧ ॥

ಹರಹರಾ ಕಾಲನಿನ್ನೆಂತಿಹುದೊ ಸೌಭಾಗ್ಯಕ್ಕೆ|
ಭರಿತನಾಗಿರ್ದಂದು ಸಕಲರೋಲೈಸಿದರ್ |
ಸುರರ ಪಾಲಾಗಲದು ಬಡತನಂ ಪೊರ್ದೆ ಭಂಗಕ್ಕೆನಿತು ಪಕ್ಕಾದೆನ್ನೈ ||
ಪೆಱೆಮುಗಂ ಬಾನೇರ್ದನಣುಗಿಯರಸನನುಯ್ದು |
ಧರೆಯತ್ತ ಸೇರ್ದಳರಸಿಯರುಮೋರೊಂದೆಡೆಯೆ |
ಳಿರುವರೆನಗಿಲ್ಲ ಗತಿ ನೀನೆಂದು ಹರಿಗೆ ಮೊಱೆಯಿಡುವುದೆನಲಬ್ಧಿ ಮೊಱೆಗುಂ
|| ೧೨ ||

ಕಾಕುತ್ಸ್ಥ ಕರುಣಾಬ್ಧಿಯನಿಮಿಷಾಶ್ರಯುಮೆನಿಸಿ |
ಲೋಕಾವೃತಂ ಲೀಲೆವಡೆದಿರ್ಪುದೆಂಬುದಂ |
ಸಾಕಾರಮಾಗಿ ತೋರ್ಪಂತಬ್ಧಿಯನಿಮಿಷಾಶ್ರಯುಮೆನಿಸಿ ಭೂಲೋಕವಮಂ ||
ಪ್ರಾಕಾರಮನೆ ಸುತ್ತಿಕೊಂಡಿರ್ದು ಬೞಿಕ ಖಳ |
ರೇಕಿಂತು ತಿಳಿಯದಱವರೊ ಕಾಣೆನೆಂದು ತಾ |
ನೇ ಕೋಪದಿಂ ಘರ್ಜಿಪಂತೆ ಬಿಡದಡಿಗಡಿಗೆ ಮೊಱೆವುದೇನಾಶ್ಚರ್ಯಮೋ
|| ೧೩ ||

ಕೊಡನಣುಗನರಸಿಗಿಂಬಿತ್ತೆನಾದೊಡಮವಂ |
ಕುಡಿದನಂದಳಿಯನೀರಾಘವಂ ಬಂಧಿಸಿದ |
ನೆಡೆಗೊಂಡುದಂ ಮಱೆದು ವಜ್ರಿ ಜೀವನಮನಪಹರಿಸುವಂ ಮೇಘಭಟರಿಂ ||
ಪಡೆದುಮೆನ್ನಿಂದಖಿಳಸಂಪದಮನೆಂದೊಡೞ |
ವ್ಪಡನೊರ್ವ ವಿಷಮನಿತ್ತೊಡೆ ವಿಷಮನೆಣಿಸನೆ |
ನ್ನೊಡೆಯನೆಂದಿರದೆ ಪೊಗೞವೊಲಬ್ಧಿ ಮೊಱೆವುದೋರೊರ್ಮೆ ಕಿಱುಪೆರ್ದನಿಗಳಿಂ
|| ೧೪ ||

ಸತ್ಯದೊಳ್ ಶರಣರಕ್ಷಣೆಯೊಳನುನಯದೊಳುಪ |
ಕೃತ್ಯದೊಳ್ ಗಂಭೀರಭಾವದೊಳ್ ಸಾಹಸದೊ |
ಳತ್ಯಧಿಕಕೀರ್ತಿಯೊಳ್ ಸತ್ವಾತಿಶಯದೊಳನುಗತವಾಹಿನೀನಿಕರದಿಂ ||
ನಿತ್ಯಲೀಲಾವಿನೋದಂಗಳೊಳ್ ಶ್ರೀಯೊಳೌ |
ಚಿತ್ಯದಾನಂಗಳೊಳ್ ವಿಭವದೊಳ್ ದಶರಥಾ |
ಪತ್ಯನಿಂ ಕಿಱಿಯನಲ್ಲೆಂಬಂತೆವೊಲ್ ಶರಧಿ ಘೋಷಿಸುತ್ತಿರ್ಪುದನಿಶಂ || ೧೫ ||

ಪುತ್ರನೊರ್ವಂ ರಾಜನಣುಗಿಯೆ ಜಗನ್ಮಾತೆ ।
ಮಿತ್ರನಭವಂ ಧೂತಪಾಪೆ ತನ್ನರಸಿ ಶತ ।
ಪತ್ರನೇತ್ರಂ ಮನೆಯಳಿಯ ನೋಡೆ ಮಮ್ಮಕ್ಕಳೆನಗೆ ರತಿಕಾಮರ್ವೆಸೆ ॥
ಗೋತ್ರರಾಜಂ ಮಾವನತ್ತಿಗೆಯೆ ಪಾರ್ವತಿ ಪ ।
ವಿತ್ರನಾಂ ಮೊದಲೆ ತನಗೆಣೆಯಪ್ಪನಾವಂ ಧ ।
ರಿತ್ರಿಯೊಳಗೆಂದು ಘೋಷಿಪುದೆಂಬೊಲರ್ಣವಂ ಬಾಯ್ವಿಡುತ್ತಿರ್ಪುದೆಂದುಂ
॥ ೧೬ ॥

ಪಿರಿದು ರಾಷ್ಟ್ರಂ ಪ್ರಜೆಗಳನಿಮಿಷರ್ ಮಾರುತಂ ।
ಚರಸಿರ್ಪನನುಸರಿಸಿ ವಾಹಿನೀಬಲಮುಂಟು ।
ಮಱೆಗೊಂಬುದೆನ್ನ ಭೂಭೃತ್ಕುಲಂ ರತ್ನಭಾಂಡಾಗಾರಮಿರ್ಪುದಿನ್ನು ॥
ನಿರತಸತ್ವಾತಿಶಯಮಿರಲೇನನೆಸಗಿದೊಡ ।
ಮೊರೆವರಾರುಂಟು ಪುಲ್ಗೆಣೆಯಲ್ತೆ ಮುಳಿದೂಡಾಂ ॥
ಸರಸಿಜಭವಾಂಡಮೆಂದುಬ್ಬರದೊಳಬ್ಬರಿಪ್ಪೊಲರ್ಣವಂ ಘೂರ್ಣಿಸುವುದು ॥೧೭॥

ಏಸಿದಚ್ಚರಿ ಬೇಡಿದರ್ಗೆ ಕರಿತುರಗಭೂ ।
ಧೇನುನವರತ್ನಕನ್ಯಾಕಲ್ಪಭೂರುಹನ ।
ವೀನಪೀಯೂಷವಸ್ತ್ರಾಭರಣಗೇಹಸಿಜವೇಹಂಗಳಂ ಮಾಣದೆ ॥
ದಾನಮಿತ್ತಾದುದೇನಿರ್ಪುದೆಮಗೀಯಲೆಂ ।
ದಾನೀರದಂಗಳಬ್ಧಿಯನಳ್ಕಿ ಬೇಡಿದೊಡೆ ।
ತಾನಂಜಿದನೆ ಜೀವನಂಗೊಟ್ಟನೆನೆ ಚಿತ್ರಮಲ್ತೆ ಧಾರ್ಮಿಕರ ಚರಿತಂ ॥ ೧೮ ॥

ಸುರರಿಗಮೃತಂ ಬೇಕೆ ಮನಮುಂಟೆ ಕಾಲಕಂ ।
ಧರಗೆ ವಿಷದೊಳ್ ಬಾಲಚಂದ್ರಂಗೆ ಪಯಮಿಹುದೆ ।
ಶರಮುಂಟೆ ವೀರರ್ಗೆ ಕೀಲಾಲಮಸುರರ್ಗೆ ದೊರೆತುದೇ ಲಾವಣ್ಯಮುಂ ॥
ಸ್ಮರನಿಚ್ಛಿಪನೆ ಕುಶಮನಱಸುವರೆ ಯಮಿಗಳ್ ಘ ।
ನರಸಮುಂ ಕೊಂಡರೆ ರಸಜ್ಞರುಂಟೆನ್ನುಮಾ ।
ದರದೆ ತಾನೀವೆನೆಂದೊರೆವಂತೆ ಮೊಱೆವಂ ತೆಱತೆಱದಿಂದಬ್ಧಿರಾಜಂ ॥ ೧೯ ॥

ಪೆರ್ಚಿದುರ್ದಧಿಕತರಸತ್ವದಿಂ ಸತ್ವದಿಂ |
ದುರ್ಚಿ ಮೆಯ್ದ್ಗರೆವ ರಾಜೀವವಮಾಜೀವವಮಂ |
ಕರ್ಚಿ ಪಾಯ್ದುಡಗುವ ತರಂಗದಿಂ ರಂಗದಿಂಡೆಬ್ಬಿ ಪೆರ್ಮಿರ್ಗೆನಿನಿಂದ ||
ಸಾರ್ಚಿ ಮುಂ ಸುೞಿವ ಜಲವಾಜಿಯಿಂ ವಾಜಿಯಿಂ |
ದಿರ್ಚಿಡಿದ ವಿದ್ರುಮವಿತಾನದಿಂ ತಾನದಿಂ |
ಬೆರ್ಚಿ ಪರೆದೋಡುವಾನೆಗಳಿಂದ ನೆಗೞ್ದ ನೆಗೞ್ದಲಾಸಮುದ್ರಂ || ೨೦ ||

ಪಟ್ಟುಱೆದು ಸಂಚರಿಪ ಬಾಳೆಯಂ ಬಾಳೆಯಂ |
ಮುಟ್ಟವಿಸಿ ನಡೆತರ್ಪ ನಕ್ರಮಂ ನಕ್ರಮಂ |
ಮೆಟ್ಟಿ ಬಹ ಶಕುಲಮಂ ಶಕುಲಮಂ ಬೆಂಬತ್ತಿ ಪರೆವವರಮೀನ ಮೀನಂ ||
ಬಿಟ್ಟಡಂಗುವ ಜಲಗ್ರಾಹಮಂ ಗ್ರಾಹಮಂ |
ದಿಟ್ಟಿಸುತೆ ಪಿಂಜರಿವ ಕಮಠಮಂ ಕಮಠಮಂ |
ಕಟ್ಟಿಸಕದಿಂ ಪಾರ್ವುಲೂಪಿಯನುಲೂಪಿಯಂ ಬಣ್ಣಿಸಲ್ ನೆಱೆವರಾರ್ಕೆ || ೨೧ ||

ಭವನಂತೆ ಗಿರಿಸುತಾನ್ವಿತನೆಂದೆನಿಸಿ ಮನೋ |
ಭವನಂತೆ ಮಕರಕೇತನನಾಗಿ ಕಮಲಸಂ |
ಭವನಂತೆವೋಲ್ ಸರಸ್ವತಿಯುರಸನೆಂಬ ಪೆಸರಂ ಪಡೆದು ಲೋಕಮಱಿಯೆ ||
ಭವನಲ್ಲ ಮೇಣ್ ಮೆಯ್ಯೊಳೊಪ್ಪಿರ್ದುವಮಾತ್ಮಸಂ |
ಭವನಲ್ಲ ಲಾವಣ್ಯಲೀಲೆಯಿಂದೆಸೆದಬ್ಜ |
ಭವನಲ್ಲ ಸಕಲಭುವನಾಶ್ರಯಂ ತಾನೆನಿಸುತರ್ಣವಂ ಕಣ್ಗೊಳಿಪುದು || ೨೨ ||

ಅಡಿಗಡಿಗೆ ಬರ್ಪ ಬಲ್ದೆರೆಗಳೇ ರಿ೦ೀ೧ಂಗ |
ಳೊಡನೆಬ್ಬಿ ಕಲ್ಲೋಲಮಾಲೆಯೆ ಬೆದರ್ಕೆ ಸಂ |
ಗಡಿಸಿರ್ಪ ಸುೞಿಗಳೇ ರಾಗಂಗಳೇಱಿೞಿಯೆ ಪಿರಿತನಂ ಬಡತನ ವಲಂ ||
ಬಡಬಾನಲಂ ಚಿಂತೆ ದುಃಖಮೆ ಪೊನಲ್ ಬಾೞ್ಕೆ |
ಗಡ ಗುಳ್ಳೆ ಬೆಳ್ನೊರೆಯೆ ಸಂತಸಂ ಸುಖಮೆ ಮೇಲ್ |
ಸಿಡಿವ ಸೀರ್ಪನಿಯೆನಲ್ ಶರಧಿ ಭವಶರಧಿಯಂ ಪೋಲ್ತೆಸೆದುದಚ್ಚರಿಯೆನೆ
|| ೨೩ ||

ಮಕರಕರ್ಕಟಕಹರಿಮಿಥುನದಿಂದನಿಮೇಷ |
ನಿಕರದಿಂ ದ್ರೋಣಂ ತಿಮೀನಂಗಳಿಂದೊಪ್ಪು |
ತ ಕಳಂಕಮೆನೆ ಧನುಷ್ಕೋಟಿಯಿಂ ಬೆರೆದತುಳವೃಷಕೆ ನೆಲೆವನೆಯಿದೆನಿಸಿ ||
ಪ್ರಕಟದಿಂ ಕುಂಭಜನ್ಮಾಪೋಶನಕೆ ಸಂದು |
ಸಕಳಸೌಭಾಗ್ಯಸಹ ಕನ್ನೆಯಂ ಪದೆದಿತ್ತು |
ಸುಕರಮೆನೆ ರಂಜಿಸಿತು ವಾರಾಶಿ ರಾಶಿರಾಶಿಯನಾಂತ ಗಗನದಂತೆ || ೨೪ ||

ತನುವಿಗತಿಹಿತವಾಗೆ ಪೆಱತೊಂದು ಬಗೆಯಿಂ ರ |
ಸನಕೆ ಸವಿದೋಱೆ ದುರ್ಗಂಧವಂ ಪವಮಾನ |
ನಿನಗಲ್ಚಿ ನಾಸಿಕಕೆ ಸೊಂಪೀಯೆ ಕಣ್ಗೆ ತಾನಧಿಕಗಂಭೀರವಾಗೆ ||
ಘನಘೋಷವಿಂಪೀಯೆ ಕಿವಿಗೆ ಸಂತಸವಾಗೆ |
ಮನಕೆ ಮಿಂದುಂಡು ಕಾಣ್ಬರ್ಗನಲ್ಕರ್ಣವಂ |
ತನತನಗೆ ಮೊಱೆದೇೞ್ವ ಭಂಗಸಂಗದೊಳೊಪ್ಪಿ ರಂಜಿಸುತ್ತಿರ್ಪುದೆಂದುಂ ||೨೫||

ಸಾರದತ್ಯಧಿಕಗಂಭೀರದನಿಮೇಷಸಂ |
ಚಾರದವನೀಧರಾಧಾರದ ಸುರನ್ನ ಭಂ |
ಡಾರದ ತರಂಗವಿಸ್ತಾರದೊಡನೆಸೆವಕೂಪಾರದ ಬೆಡಗನೀಕ್ಷಿಸಿ ||
ವೀರಮರ್ಕಟಕಟಕನಾಯಕರ್ ಸಹಿತ ಸೀ |
ತಾರಾಮನಕ್ಕಜಂಗೊಂಡೊರೆದನಪ್ಪಿ ವೈ |
ಸಾರಿ ನಗೆಬೀಱಿ ಕರೆಮೀಱಿ ಬಹ ವಾರಿಧಿಯ ತೋಱಿ ನಿಜನಾರಿಯೊಡನೆ
|| ೨೬ ||

ಕಂಬುಕಂಧರೆ ಶಂಖದಿರವ ನೋಡೆಲೆ ಚಂದ್ರ |
ಬಿಂಬಮುಖಿ ಕಾಣ ಚಂದ್ರಮನತ್ತಣಿಂದುಬ್ಬು |
ವಂಬುನಿಧಿಯಂ ನೋಡು ಮತ್ಸ್ಯಗಳ ಮೀನಾಕ್ಷಿ ಪುಳಿನಮಂ ಪುಳಿನಜಘನೆ ||
ತುಂಬಿಹುದು ಮಣಿ ಶುಕ್ತಿ ಮೌಕ್ತಿಕಸುರದನೆ ಮುಱಿ |
ಗಿಂಬಾದ ಪರ್ವತಂ ಪರ್ವತಸ್ತನೆ ನೋಡಿ |
ದಂ ಬೞಿಕ ಕುಂಭಿಯಂ ಗಜಗಮನೆ ತೋರ್ಕು ಚೆಂಬವಳಂ ಪ್ರವಾಳಾಧರೆ
|| ೨೭ ||

ದೂಷಣನ ದುರ್ಮಾರ್ಗದಂತೆ ದಶಕಂಧರನ |
ರೋಷದಂತತುಲಿತಪ್ರತಾಪದಂತಿಂದ್ರವಿ |
ದ್ವೇಷಕನ ಕುಂಭಕರ್ಣನ ಮುನಿಸಿನಂತೆ ಮಹಿರಾವಣನ ಕಪಟದಂತೆ ||
ದೋಷದಂತಖಿಳದಿತಿಸಂಭವರ ಪುಣ್ಯದ ವಿ |
ಶೇಷದಂತತಿಕಾಯನುಗ್ರದಂತುಗ್ರಸ ವಿ |
ಭೀಷಣನ ಭಕ್ತಿಯಂತಡಿಗಡಿಗೆ ತೋರ್ಪ ಪೆರ್ದೆರೆಗಳಂ ನೋಡೆಂದನು || ೨೮ ||

ವತ್ಸ ಕೇಳಿಂತೆಸೆವಕೂಪಾರಮಂ ಭಕ್ತ |
ವತ್ಸಲಂ ವಿಬುಧೇಂದ್ರಮಣಿಮುಕುಟಘಟಿತಭಾ |
ಸ್ವತ್ಸದಮಲಪದಪದ್ಮಂ ಸುಗುಣಸದ್ಮಂ ಸರೋಜಾಕ್ಷಿಗೊಲ್ದು ತೋಱಿ ||
ತತ್ಸಮಯದೊಳ್ ರಾಜರಾಜನ ವಿಮಾನಂ ಚ |
ಲತ್ಸಮುದ್ರವನುೞಿದು ಪೊಜಟುತ್ತರಕೆ ವಿರಾ |
ಜತ್ಸರಸಿನದನದೀವಿಪಿನಗಳ ಸಾರ್ದು ಬರೆ ರಾಘವಂ ರಮಣಿಗೆಂದಂ || ೨೯ ||

ಅತಿತನೂರುಹಬಲಂ ಬಲವೈರಿನುತನೆಮ್ಮ |
ಪಿತಗೆ ಮಿತ್ರಂ ಮಿತ್ರಸೂತಸುತಸೂದ್ಭವಂ |
ಚತುರಂ ವಿಹಂಗರಾಜಂ ರಾಜರಾಜಸಖಸದ್ಭಕ್ತನಪ್ರತಿಮನು ||
ದಿತಿಜಗರ್ವಾಪಹಾರಂ ಹಾರಕಂಧರೆ ವಿ |
ಗತದುರಿತಸಂಪಾತಿ ಸಂಪತ್ಸುಖಾಶ್ರಯವಿ |
ತತವಿಪಿನಮಿದು ನೋಡು ನೋಡಿತ್ತಲಿತ್ತಲಂಬುಜದಳಾಯತಲೋಚನೆ ||೩೦||

ಮುಂದೆ ತೋರ್ಪುದೆ ಕೊಳಂ ಮಯನಿರ್ಮಿತಂ ಮಡದಿ |
ಪಿಂದೆ ನಿನ್ನಂ ಪುಡುಕಿ ಬರೆ ತೊಡಕಿ ಬಿಲಸಾರ್ದು |
ಸಂದೆಗಂಬಡೆ ಸೌರಿಪುತ್ರಿಮಂದಿರಕ್ಕೈದಿ ಮೂವಗಲ್ ಕಪಿಗಳುೞಿದು ||
ಬಂದೆನುತ್ತುಸಿರೆತ್ತುವನ್ನೆಗಂ ಪುಷ್ಪಕಂ |
ಸಂದೆಡೆಯ ಕಿಷ್ಕಿಂಧಮಂ ಕಾಣೆ ತೋಱಿ ಸತಿ |
ಗಂದೆಮ್ಮ ಬೞಿವಿಡಿದ ಕೀಶಬಲನಾಯಕಂ ಸುಗ್ರೀವನೆಡೆಯಿದೆಂದಂ || ೩೧ ||

ಆದೊಡೀತಂಗೊರ್ವನಣ್ಣನುಂಟವರೊಳ್ ವಿ |
ವಾದಮಿರೆ ಪೆಣ್ಣಿಂ ಸಹೋದರಂ ಗೆಲ್ದಟ್ಟಿ |
ಲಾದುಗುಡಮಂ ತನ್ನ ಮಡದಿಯಪಹರಣಮಂ ದೂಱಲ್ಕೆ ಬಳಿಕೆನ್ನೊಳು ||
ಕಾದಿ ರಣದೊಳ್ ವೈರಿಯಂ ಮಡುಹುತೆಮ್ಮವಂ |
ಗಾದರಿಸಿದೆಂ ಸಹಾಯಕನಾಗುತೆಮಗೆ ಸಂ |
ಮೋದಮಪ್ಪಂತೆ ಪ್ರತ್ಯುಪಕರಿಸಿದಂ ಮೇಣೆಸಲ್ಕವರ್ ನೆರೆಸಾರ್ದರು || ೩೨ ||

ತಾರಾ ರುಮಾದಿ ನಾರಿಯರಂದು ಬಿಸುಟ ಮಣಿ |
ಹಾರಾದಿದಿವ್ಯಭೂಷಣಗಳಂ ಬೞಿಕ ಸೀ |
ತಾರತ್ನ ಕೊಳ್ಳೆಂದು ಮಣಿದಿತ್ತೊಡವರ ಮನ್ನಿಸಿ ಕೊಂಡಳವನಿಜಾತೆ ||
ಶ್ರೀರಾಮನಂ ಬೞಿಕ ಸುಗ್ರೀವನಾತಿಥ್ಯ |
ವಾರ್ೈದು ಪೋಗೆಂದು ಬೇಡಿದೊಡೆ ದಶರಥಕು |
ಮಾರಂ ಕುಮಾರಂ ಕುಮಾರಂ ಕುಶಲದೆ ಸಂತಯಿಸೆ ಪೊಱಟುದು ಪುಷ್ಪಕಂ
|| ೩೩ ||

ಮುಂದೆ ಮುಂದೈತರಲ್ಕತಿಜವದಿ ಪವನನಂ |
ಪಿಂದುೞಿಪಿ ಕೆಱೆ ತೊಱೆಗಳಂ ಕಳೆದು ರಥಮರಸಿ |
ಗಂದು ರಕ್ಕಸಪಕ್ಕಿಗಳ ಪೊಣರ್ಕೆಯ ವಿಪಿನಮಂ ತೋಱೆ ಸುಟ್ಟುವೆರಲಿಂ ||
ಕಂದೆ ಮೊಗಸಿರಿಯೆಸಱ್ಗೆಣ್ಣೊಸಱೆ ಮೈಬಣ್ಣ |
ಗುಂದೆ ಬೆಮರುಣ್ಮೆ ಬಿಸುಸುಯ್ಲೆರ್ದು ಮೂಗರಳೆ |
ಚೆಂದುಟಿಯೊಳಿಂಪಡಗೆ ಪೇೞ್ದಳಿನಿಯಂಗೆ ನಿಟ್ಟುಸಿರಿಂ ಸರೋಜಾನನೆ ||೩೪||

ವರ್ಮದಿಂ ಖಳನನಡ್ಡೈಸಲ್ ಜಟಾಯು ನಿಜ |
ಮರ್ಮಮಂ ಪೇೞ್ಬೞಿದನೆನಲೆತ್ತಲೆಡೆ ಸತ್ಯ |
ಧರ್ಮಕಿನ್ನ ಕಟಕಟ ಖಳರಂತರಂಗಮಂ ಬಲ್ಲರಾರಿಳೆಯೊಳೆನ್ನ ||
ಕರ್ಮಪಾಕದೊಳಸುರನುಯ್ದೊಡಂ ಕಾವೆನೆಂ |
ದೊರ್ಮನದೊಳೊದವಿದಾಪದ್ಬಾಂಧವಂಗೆ ಸಾ |
ಸಿರ್ಮೆ ನೆನೆನೆನೆದೊಡಂ ತೀರದಹಹಾ ಪರಹಿತೇಚ್ಛಕರ ಜಸಮದೆಂತೋ
|| ೩೫ ||

ಎಂಬನ್ನೆಗಂ ವನಂ ಕಂಡಡಗಿದಂತಾಗೆ |
ಮುಂಬರೆದು ಪುಷ್ಪಕಂ ಬರುತಿರಲ್ಕತ್ತ ರಾ |
ಮಂ ಬೆರಲ್ದುದಿಯಿಂ ಸಮೀಪಿಸಿದ ಪಂಚವಟಿವಿಪಿನಮಂ ತೋಱುತೆಂದಂ ||
ಅಂಬುಜಾನನೆ ದನುಜೆ ಕಾಡಿದೆಡೆ ನೋಡಿತ್ತ |
ಲಂಬಿಂ ಸಹೋದರಂ ಮಾನಗಳೆದಿರ್ಪ ತಾ |
ಣಂ ಬವರಮುಖದಿ ಖಳರೞಿದ ನೆಲೆ ಪೊಮ್ಮಿಗಂ ನಲಿದುದಿಲ್ಲಿತ್ತಲೆಂದು ||೩೬||

ಅರಗಿಳಿಯನುೞಿದ ಪಂಜರದಂತೆ ಜೀವನಂ |
ತೊಱೆದ ತನುವಂತೆ ಭಗಣೇಶನಡಗಿರ್ದ ಕಾ |
ರಿರುಳಿನಾಗಸದಂತೆ ತೋರ್ಪುದೆಲೆವನೆಯುಂದಿನೆಡೆಯು ನೋಡಬ್ಜಾನನೇ ||
ಪರೆದು ಕೀೞ್ಮೊಗಗೊಂಡು ಮಾಧವೀಲತೆಯೆ ಮಾ |
ಮರನೊಳೊಪ್ಪಂಬಿಟ್ಟುದಿತ್ತಿತ್ತ ಬಾಡಿದುದು |
ಕುರುವಕಂ ನೋಡೆಂದು ತೋಱೆ ಬೞಿಕಾರಥಂ ಪರೆದುದುತ್ತರಕೆ ಜವದಿ
|| ೩೭ ||

ದಾಟಿ ಪುಣ್ಯಕ್ಷೇತ್ರಮಂ ತೊಱೆದು ತೊಱೆಯಂ ಮು |
ಹಾಟವಿಯನಗಲಿ ಬಿಟ್ಟಾಶ್ರಮಂಗಳ ಚಿತ್ರ |
ಕೂಟಮಂ ಕಡೆಗೊತ್ತಿ ಜಗುನೆಯಂ ಮೀಱಿ ಭಾರದ್ವಾಜನೆಡೆಯನುೞಿದು ||
ನೋಟಕಳವಟ್ಟುದಿಲ್ಲೆನೆ ಧಾತ್ರಿ ಪುಷ್ಪಕಂ |
ಸಾಟಿದೋಱದೆ ನಡೆಯಲತ್ತಲಿತ್ತಲ್ ಹನುಮ |
ನೋಟಗೊಂಡ್ಯೆದಿದಂ ಪವನಾಧ್ವದೊಳ್ ರಾಮನಾಜ್ಞೆಯಂ ಶಿರದೆ ಪೊತ್ತು
|| ೩೮ ||

ಏನೆಂಬೆ ಪವನಜನ ವೇಗಮಂ ರಾಘವಂ |
ತಾನೆ ಮುಂದಟ್ಟಿದಂ ಬೞಿಕಿದಿರ್ಗೊಂಡು ಸ |
ನ್ಮಾನಿಸಲ್ಕೆಂದು ವನಗಿರಿನದಿನದಂಗಳಂ ಪೇೞಿ ಕಳುಪುವನೊ ಹನುಮಂ ||
ಆನರೇಂದ್ರನ ಕಾಣ್ಬ ತವಕದಿಂ ತಾವೆ ಮೇಣ್ |
ಸಾನುರಾಗದೊಳೈದುವುವೊ ತಿಳಿಯದೆನುತಲನು |
ಮಾನಗೊಳೆ ಸಹಚರಂ ಪವನನನಿಲಜನಚಲಮುಖ್ಯಮಂ ಕಳೆದೈದಿದಂ || ೩೯ ||

ಚಿತ್ತವಿಪುದಾದೊಡೆಲೆ ವಿಪ್ರ ಮುಂತನಿತಱೊಳ |
ಗಿತ್ತಲೊಂದಬ್ದಮಂ ಮನ್ವಂತರಕೆ ಬಗೆದು |
ಸುತ್ತಿ ಜಡೆಯುಟ್ಟು ನಾರುಡಿಗೆಯಂ ರಾಮನಂ ನೆನೆದು ನಂದಿಗ್ರಾಮದಿ ||
ಬತ್ತಿ ಮೆಯ್ಯೊಳ್ ಭರತನೀರೇೞುವರುಷಮಂ |
ದತ್ತಪಾದುಕೆಯ ಸೇವೆಗೆ ಕಳೆದು ರಾಘವನ |
ಪೊತ್ತನೀಕ್ಷಿಸಿ ಕಾಣದಿರಲಿಂತು ಮಱುಗಿದಂ ಸೋದರರೊಳೆಱಕಮೆಂತೋ
|| ೪೦ ||

ತಪ್ಪಲೊಳ್ ಕಲ್ಲರಳೆ ಗಿರಿಯುರುಳೆ ತಿರೆ ಪೊರಳೆ |
ತೆಪ್ಪ ಬಾನೊಳ್ ಪಾಱೆ ಕಡಲಾಱೆ ನಿಲಲಾಱೆ |
ಬಪ್ಪೆನೀಪೊೞ್ತಿಗೆಲೆ ಭರತ ನೆಲೆಯಱುತು ಸಲೆ ಸಂತಸದೆ ಪೋಪುದೆಂದು ||
ಒಪ್ಪುವಂತೆನ್ನ ಕೈದಟ್ಟಿ ಪುರಕಟ್ಟಿ ತೆರ |
ಳಿಪ್ಪ ರಾಮಂ ಬಾರದಿಹ ಕಾರಣಂ ತೋಱ |
ದಿಪ್ಪುದಿನ್ನುಂ ಕಾಣೆ ತನ್ನಾಣೆಗಿನ್ನಾಣೆಯಂ ತರ್ಪನೆಂತೊ ತಿಳಿಯೆಂ || ೪೧ ||

ಪಿತನೞಿದ ಶೋಕದಿಂದುೞಿದನೋ ಕೈಕೆಗೆ ಕು |
ಪಿತನಾಗಿ ಬಾರದಿರ್ಪನೊ ಮುನಿಗಳೊಲ್ದು ಸಲ |
ಪಿ ತಮಗಪ್ಪವನೆಂದು ಮನ್ನಿಸುತ್ತಿರಲಿರ್ದು ಮಱೆದನೋ ನಮ್ಮನಕಟ ||
ಸತಿಗದೇನೆಡರಾಯ್ತೊ ಸೋದರಂಗಣ್ಣಗೆ ವ |
ಸತಿಯೊಂದೊ ಬೇಱಾಯ್ತೊ ಬರ್ಪುದಂ ಕಾಣೆ ಸರ |
ಸತಿಯರಸನೆನ್ನ ಪಣೆಯೊಳ್ ಬರದುದೆಂತುಟೊ ರಾಮನಡಿಯಂ ಕಾಣ್ಬೆನೋ
|| ೪೨ ||

ಮಿತ್ರಾನ್ವಯದೊಳುದಿಸಿ ದಶರಥತನೂಜಂ ಸು |
ಮಿತ್ರಾತ್ಮಜಂ ಕೂಡಿ ಸತಿಸಹಿತ ಕಾನನಕ |
ಮಿತ್ರಾನುಜಂ ಭರತನಿಂಗಾಗಿ ಪೋದನೆಂದಾಡಿ ದೂಱುವರೆನ್ನನು ||
ಕ್ಷತ್ರಿಗಿದು ಸರಿಯೆ ಬೞಿಕಣ್ಣನಂ ಬಿಡೆ ವಳ |
ಕ್ಷತ್ರಿದಶರಾಜನೆಡೆಗೆಯ್ದಲಿರ್ಪುದೆ ವಿಪ |
ಕ್ಷತ್ರಿಪುರವೈರಿಯಡಿಯಾಣೆ ಹತಭಾಗ್ಯನಾಂ ನೋಂತ ನೋಂಪಿನ ಫಲವಲಾ
|| ೪೩ ||

ಸೇವೆಗೆಯ್ದುದಿಲ್ಲಮಾಂ ಮನಃಪೂರ್ವಕಂ |
ಭಾವಿಸಿದುದಿಲ್ಲ ಭಯಭಕ್ತಿಯಿಂ ಲೀಲೆಗಳ |
ನಾವಗಂ ಕಂಡಿಲ್ಲವೊಡನಾಡಿತಿಲ್ಲ ಸೌಖ್ಯದೊಳೊಂದು ದಿನವಾದೊಡಂ ||
ದೇವನೆಂದಱಿತುದಿಲ್ಲಣ್ಣನಂ ಲಕ್ಷ್ಮಣನ |
ನೋವಲಿಲ್ಲಕಟ ಭೂಜಾತೆ ಮಾತ್ರೆಯಿಂ |
ಬೀವಿವರ ಮನಕೆ ಬರಲಿಲ್ಲ ಬರಲಿಲ್ಲಮಿನ್ನುಂ ರಾಘವಂ ಪೋದವಂ || ೪೪ ||

ತಾತಗಟ್ಟಿವಂ ತಂದೆನಗ್ರಜನ ಪೊಱಡಿಸಿದೆ |
ಮಾತೆಯರ ಮುಳಿಸಿಗೆಡೆಯಾದೆ ಮೇಣ್ ಬಂಧು |
ಗಳ ಮಾತಿಗೊಳಗಾದೆ ಪರಿಜನಕೆ ಕೀೞಾದೆ ಪುರಜನರ ಬಿಱುನುಡಿಗೆ ತಡೆದೆ ||
ಜಾತಿರಾಜರ ಪಟ್ಟಿವನೊಳಕೊಂಡೆ ನಾನೀಧ |
ರಾತಳವನಖ್ಯಾತಿಯಿಂ ಮಲಿನಗೆಯ್ದೆನೀ |
ಪಾತಕಂ ಪೋಪುದೆಂತೆಂತಗ್ರಭವನ ಪದಕಮಲದರ್ಶನಮಪ್ಪುದೋ || ೪೫ ||

ಬುದ್ಧಿದೋಱದ ಪಸುಳೆಯಾದೊಡಂದಣ್ಣನಂ |
ಶ್ರದ್ಧೆಯಿಂ ಸೇವಿಸಲ್ಕಕ್ಕು ಸುಫಲಂ ತನಗೆ |
ಸಿದ್ಧಮೆಂದಱಿತು ಕೌಶಿಕನುಯ್ಯೆ ರಾಮನಂ ಕೂಡೆ ತಾಂ ತೆರಳಿ ಬೞಿಕ ||
ವೃದ್ಧಿಗೊಂಡೈತಂದು ಪಿತನನುಜ್ಞೆಗೆ ವನಕೆ |
ಸದ್ಧರ್ಮಮಂ ಪಿಡಿದು ರಾಘವಂ ಪೊಱಡೆ ಸಂ |
ಪದ್ಧರೆಯನಬಲೆಯಂ ಮಾತೆಯಂ ತೊಱೆದು ಲಕ್ಷ್ಮಣನ್ನೆವಲೇಂ ಧನ್ಯನೋ || ೪೬ ||

ಇಷ್ಟದಿಂ ಕೆಳದಿಯರೊಳಾಡುತಂತಃಪುರದಿ |
ಮೃಷ್ಟಾನ್ನಮಂ ಸವಿದು ರನ್ನದೊಡವೊಳ್ಪುಡೆಯು |
ತುಷ್ಟಿಯಿಂ ಗಾಡಿಮಿಗೆ ಪಟ್ಟು ಮೃದುತಲ್ಪದೊಳ್ ಶುಕನ ನುಡಿಗೇಳ್ವ ಸುಖಮಂ ||
ಕಷ್ಟದಿಂ ವನದೊಳೋರ್ವಳೆ ತಿರಿದು ಬೞಲುತ ನಿ |
ಕೃಷ್ಟದುಣಿಸುಂಡಱಿಯೊಳೊಱಗಿ ನಾರುಡಿಗೆಯಿಂ |
ದುಷ್ಟಕೇಸರಿಯ ದನಿಗೇಳ್ವ ದುಃಖದಿ ತೊಱೆಯೆ ಸೀತೆಗೆ ಮನಂ ಕರಗದೇ || ೪೭ ||

ತಂಬೆಲರ್ಸೋಂಕೆ ಬಳ್ಕುವ ಲತಾಂಗಮುದಿಱಿಸಿ |
ಲಂ ಬೇಱೆ ತಡೆದುಂಟೆ ಬಗ್ಗದೊವಲಂ ಕಂಡೊ |
ಡಂ ಬೆರ್ಚುವೆರಳೆಗಣ್ ಪರಿವ ಪೆರ್ಬುಲಿನೋಟಮಂ ಸಹಿಸಲುಂಟೆ ವನದಿ ||
ತುಂಬಿಯುಲಿಗಳ್ಕುವತಸೀಕುಸುಮಕರ್ಣಮೆಂ |
ತಿಂಬಕ್ಕು ಸಿಂಹಘರ್ಜನೆಗೆ ಬಿದುಗಲ್ನೆಲದೊ |
ಳುಂ ಬಾಡುತಿರ್ಪ ತಳಿರಡಿ ನಡೆಯೆ ಕಾಪಥದೊಳೆಂತಪ್ಪುದವನಿಸುತೆಗೆ || ೪೮ ||

ಪುಟ್ಟಿದೊಡಮರಸನಿಂಗರಸುಗೆಯ್ಯದೆ ಪೊೞಲ |
ಬಿಟ್ಟು ವನವನಜವನಚರರ ಪಾಲಿಪ ಮನಂ |
ಪುಟ್ಟ ಗಡ ತೆರಳಿದಂ ಹರಿಯ ಮಹಿಮೆಯನಾವನಾವಗಂ ತಿಳಿದುದುಂಟೆ ||
ದಟ್ಟಡಿಯ ಸೋಂಕಿನಿಂ ಕಲ್ಗಳೆನಿತೆನಿತೊ ಕುಡಿ |
ದಿಟ್ಟಗೆಡೆಗೊಂಡು ಕಾಟ್ಮೃಗಗಳೆನಿತೆನಿತೊ ಮೈ |
ಮುಟ್ಟೆಲರ್ ಸೋಂಕೆ ಭೂಜಂಗಳೆನಿತೊ ಪಾವನಮಾದುವಾರಾಮನಿಂ || ೪೯ ||

ರಾಜಿಸುವ ಸಾಲಮಲ್ಲಿದು ಕಂದರಂ ಭುವನ |
ರಾಜಿಯಲ್ಲಿದು ಮಹೀಧ್ರಶ್ರೇಣಿಕಟಕಮಿದು |
ರಾಜಹರ್ಮ್ಯಾಗ್ರಮಲ್ಲುತ್ಸಮಿದು ಕೊಳನಲ್ಲ ನಿರ್ಝರಂ ಸರಯುವಲ್ಲ ||
ಸಾಜಮಿದು ಗಹನಮಾರಾಮಮಲ್ಲ ರಸಾಲ |
ಭೂಜಮಲ್ಲಿದು ವಲಂ ಕಾಷ್ಠವೃಕ್ಷಂ ಮೃಗಗ |
ಳೀಜನಗಳಲ್ಲದಲ್ಲೆನೆ ರಾಮನುೞಿದ ಪೊೞಲಲ್ಲಮಿದು ವಿಪಿನದೇಶಂ || ೫೦ ||

ಪಾಪಿ ತಾನಾದೊಡಂ ಕೈಕೆಯುಟ್ಟಿದಳೆಂದು |
ಕೋಪಿಸಿದೊಡಂ ಪೆತ್ತ ಮಾತೆಯೊಳ್ ತಪ್ಪುಂಟೆ |
ಯೀಪುರದ ಜನರೊಳನ್ನಯಮುಂಟೆ ಕುಂದುಂಟೆ ಮಂತ್ರಿಗಳೊಳರಸಾಣೆಗೆ ||
ಲೋಪಮಿನ್ನುಂಟೆ ಪರಿಜನರೊಳಗೆ ಮೇಣ್ ಮನ |
ಸ್ತಾಪಮಿರ್ಪುದೆ ಬಂಧುವರ್ಗದೊಳಗಿಂತೆನ |
ಲ್ಕೀಪರಿಯೊಳೆಲ್ಲರಂ ತೋಱಿದಿರ್ಪನೇತಕಿನ್ನುಂ ಬಾರನಾರಾಮನು || ೫೧ ||

ತೋಱಿ ನೀಂ ದೇವೇಂದ್ರ ರಾಘವೇಂದ್ರನ ಕರೆದು |
ತಾರ ಪಾವಕ ವಿಪಿನವೈರಿಪಾವಕನ ಕರ |
ತಾರ ನೀನಿತ್ತಲಂತಕ ತಾಟಕಾಂತಕನ ಪುಣ್ಯಜನ ಪುಣ್ಯಜನನಂ ||
ವಾರಾಶಿರಾಜ ಗುಣವಾರಾಶಿರಾಜನ ವಿ |
ಚಾರಿಸ ಜಗತ್ಪ್ರಾಣ ನೀಂ ಜಗತ್ಪ್ರಾಣನನೆ |
ಲೇ ರಾಜರಾಜ ಮಮರಾಜರಾಜನನೀಶ ಪೇೞ್ದಟ್ಟ ಸರ್ವೇಶನಂ || ೫೨ ||

ತಡೆಯಲೇಕಿನ್ನವನ ಪುಡುಕಿದಪೆ ತಾನೆ ಮೇ |
ಣೊಡಲ ಬೈತಿಟ್ಟಗ್ನಿಯೊಳ್ ಪೋಪೆನೆಂದು ಸಂ |
ಗಡಿಸಿದಂ ಕಾಷ್ಠಮಂ ಬೆಱಗಾಗಲಾಗಳಾಗಸದೊಳಮರರ್ ಭಕ್ತಿಗೆ ||
ಒಡನೆ ಕಿಚ್ಚೊಟ್ಟಿ ಪೊಗೆ ಪೊಗೆದೞಿದು ಬಳೆದುದುರಿ |
ಸುಡೆಗೊಂಡು ಛಿಟಿಛಿಟಿಲ್ ಛಿಟಿಲೆಂದು ಭರತನಂ |
ಬಿಡು ಸಾಸಮಂ ದುಗುಡಮೞಿದು ಸಂತಸಮಪ್ಪುದೆಂದಚ್ಚರಿಪ ತೆಱದೊಳು || ೫೩ ||

ಮತ್ತೆ ಕೇಳ್ ಮುನಿನಾಥ ಪೌರಜನರನಿತಱೊಳ್ |
ಮುತ್ತಿ ತಮಗೞಲ್ದಿಂದರರೆಬರ್ ಮನಮಿ |
ನಿತ್ತು ಕಲ್ಲಾಯ್ತೆ ರಾಘವಗೆ ತಮ್ಮನೊಳಕಟಂ ಬಾರನಿನ್ನುಂ ನಗರಿಗೆ ||
ಪೊತ್ತಾದುದಿಲ್ಲಮೆಂದೊರೆದರರೆಬರ್ ಕೆಲರ್ |
ಸುತ್ತಿ ಕಾಡಂ ಬರಲ್ ವೇಳೆಯಱಿದಪುದೆ ಮೇ |
ಣೆತ್ತಣದು ಗಡು ಬಱಿದೆ ಬಱಿದೆ ಕಿಚ್ಚಂ ಪುಗುವ ಭರತಗಿಂತೆಂದುಸಿರ್ದರು || ೫೪ ||

ಇಂತಖಿಳರೇವೇೞ್ವನೞಲುತಿರಲಿತ್ತ ಭರ |
ತಂ ತನುವನರ್ಪಿಸುವೆನೆಂದು ಶ್ರೀರಾಮನಂ |
ಚಿಂತಿಸುತ ಮನದಿ ಬಿಲಿಬಿಱುತಿರ್ದನನ್ನಯಂ ವಹ್ನಿ ಚಿಂತಾಗ್ನಿಗೊರೆಯೆ ||
ಪಿಂತೆ ನೀಂ ವೇದಚೋರನ ಕೊಂದೆ ತಂದೆ ಬೞಿ |
ಕಾಂತೆ ಬೆನ್ನೊಳ್ ಧಾತ್ರಿಯಂ ದಯದಿ ತಂದೆ ಧರೆ |
ಯಂ ತಱಿದು ಖಳನ ಮಗು ಮಱುಗಲ್ಕೈತಂದೆ ಕಂಬಂ ಬಗಿದು ಪಾಲಿಸೆನುತ || ೫೫ ||

ದಾನವಂ ಬಲಿ ಬಲಿಯೆ ಸೊರ್ಕಿನಿಂ ಧಾತ್ರಿಯಂ |
ದಾನವಂ ಮೂಱಡಿಯ ಬೇಡಿ ನೆವದಿಂ ಮೆಟ್ಟಿ |
ದಾ ನವಪದನ್ಯಾಸದಿಂ ಖಳನ ಕೀೞಿಳೆಗೆ ದೇವ ವಾಮನರೂಪಿನಿಂ ||
ಮಾನವಾಧಿಪ ಬಾಹುಜನ್ಮರಂ ಮನದೊಳನು |
ಮಾನವಾಂತಿಲ್ಲದಿರ್ಪತ್ತ್ರೋರ್ಮೆ ಗೆಲ್ದೈ ಸ |
ಮಾನವಾರದಟು ತವದರ್ಪಕೆಲೆ ವಿಪ್ರರಿಂಗಿತ್ತೆ ಮೇಣೀಧರೆಯನು || ೫೬ ||

ರಾಮ ಜಯರಾಮ ದಶರಥರಾಮ ಕೋದಂಡ |
ರಾಮ ಸೀತಾರಾಮ ಪಟ್ಟಾಭಿರಾಮ ರಘು |
ರಾಮ ಕೋಸಲರಾಮ ನಿತ್ಯಾತ್ಮರಾಮ ಮೋಹನರಾಮ ಮಿತ್ರರಾಮ ||
ರಾಮ ಕೌಶಿಕರಾಮ ಸಾನಂದರಾಮ ಶಿವ |
ರಾಮ ಕೌಸ್ತುಭರಾಮ ಕಲ್ಯಾಣರಾಮ ಶ್ರೀ |
ರಾಮ ಸುಂದರರಾಮ ಸುಕುಮಾರರಾಮ ಶಾಂತಾರಾಮ ಭದ್ರರಾಮ || ೫೭ ||

ಚಿತ್ತದೊಳ್ ಶ್ರೀರಾಮಮೂರ್ತಿಯಂ ಕೀರ್ತಿಯಂ |
ಪೊತ್ತಿಂತು ಜಿಹ್ವಾಗ್ರದೊಳ್ ಭರತನನವರತ |
ಸುತ್ತಿ ಬಲವರುತಿರಲ್ಕನಲಸಂದನಿಲನಂದನನಿತ್ತ ಪವನಾಧ್ವದಿ ||
ಒತ್ತುಗೊಂಡೈತರಲ್ಪೊಗೆಯು ಕುಱುಪೊಗೆಯುಲುದು |
ಪೆತ್ತಣತ್ತಂ ಧಾತ್ರಿಗಿೞಿದು ಜನರುೞಿದು ಮನ |
ಮಿತ್ತು ಕಾಣುತ್ತಿರಲ್ ಸೈಪಿಡಿದು ಕೈಪಿಡಿದು ಕಟ್ಟುಸಿರೊಳವನೆಂದನು || ೫೮ ||

ದಕ್ಷನಾದೊಡೆ ಸಾಹಸಂದೋರ್ಪೆ ದಿಟವೈ ಪ್ರ |
ದಕ್ಷಿಣೆಯ ಗೈವೆ ಚಲಮಂ ಪಿಡಿದು ಮೇಣಾಶು |
ಶುಕ್ಷಣಿಯನಹಹ ನಿನ್ನವೊಲಾರುಮಂ ಕಂಡುದಿಲ್ಲ ಮೇದಿನಿಯೊಳಿತ್ತಂ ||
ದಕ್ಷಿಣಾಶೆಯದತ್ತಣಿಂ ಬರ್ಪನೆಲೆ ದೀನ |
ರಕ್ಷಕಂ ಸತಿಸುಮಿತ್ರಾತ್ಮಜರ್ಸಹಿತ ನೋ |
ಡೀಕ್ಷಣಂ ಬರ್ದೇನಮರ್ದೆ ತಡೆತಡೆ ಬಿಡುಬಿಡೀಮರುಳ್ತನವನಕಟ || ೫೯ ||

ರಾಮನೈತಂದನಸುರಾಂತಕಂ ಭುವನಾಭಿ |
ರಾಮನೈತಂದನನುಗತಭಕ್ತಚಿತ್ಸುಖಾ |
ರಾಮನೈತಂದನಮರೇಂದ್ರಪೂಜಿತಪಾದಪದ್ಮನೊಡನೈತಂದನು ||
ಸೋಮಕೋದಂಡಭೇದಕನರ್ಕಕುಲವಾರ್ಧಿ |
ಸೋಮನೀಗಳೆ ಬಂದನಿತ್ತಲವಧರಿಪುದೆಲೆ |
ಸೋಮಪುರದೊಡೆಯ ಲಕ್ಷ್ಮೀಮನೋಹರನಿರದೆ ಬಂದನೆಮ್ಮಂ ಪೊರೆಯಲು
|| ೬೦ ||

---

# ನಾಲ್ಕನೆಯ ಸಂಧಿ

ಸೂಚನೆ || ಭರತನಂ ಕಂಡು ನಂದಿಗ್ರಾಮದೊಳ್ ಮನ್ನಿ |
ಸಿರದೆ ಪುಷ್ಪಕವೇರ್ದು ಕಪಿನಾಯಕರ್ ಸಹಿತ |
ಪುರಜನರ ಮನ್ನಣೆಯಕೈಕೊಂಡು ರಾಘವಂ ನಿಜನಗರಿಗೈತಂದನು||

ಅವಧರಿಪುದೆಲೆ ತಪೋಧನ ಬಟುಕ ಪವನಸಂ |
ಭವನ ಕಂಡಕ್ಷಿಯಂ ಮೇಣವನ ನುಡಿಗೇಳ್ದ |
ಕಿವಿಯನೊರ್ಮೆಯೆ ನಂಬದನುಮಾನಮುಖದಿ ನಿರ್ಧರಿಸಿದಂ ಸಹಜವೆಂದು ||
ಭವಭವಾಂತರದ ಸುಕೃತಮೆ ರೂಪುಗೊಂಡು ಧರೆ |
ಗವತರಿಸುತಿದಿರೊಳೇನಿಹುದೊ ರವಿ ತಾನೆ ತ |
ನ್ನವಸಿವಂ ಕಿಡುವನೆಂದಟ್ಟಿದನೊ ಕಾಣೆನೀತನನೆಂದು ಭರತನಿರ್ದಂ || ೧ ||

ಪುಟ್ಟಿದುದು ಭಯವೊರ್ಮೆಯಚ್ಚರಿಯದೊರ್ಮೆ ಮನ |
ಗುಟ್ಟೊರ್ಮೆ ನಗೆಯೊರ್ಮೆ ಕಡುಪೊರ್ಮೆ ಹನುಮನಂ |
ದಿಟ್ಟಿಸಲ್ ಸಟೆಯೊರ್ಮೆ ದಿಟವೊರ್ಮೆ ಮುದವೊರ್ಮೆ ಭರತಂಗೆ ನುಡಿಗೇಳ್ದೊಡೆ ||
ಬಿಟ್ಟಿಂತುಮಿರದೆ ಚಂಚಲಮನಿಂತೆಂದನೆಲೆ |
ಕಟ್ಟಿದಿರೊಳೈತಂದು ಮರಣೋನ್ಮುಖಂಗೆ ಸೊದೆ |
ಗೊಟ್ಟು ಕಾವಂತೆ ನುಡಿಸೊದೆಯೊಳೆನ್ನಂ ಪೊರೆಯಲುಜ್ಜುಗಿಪೆ ನೀನಾವನೈ
|| ೨ ||

ದಿಟವೆ ನಂಬಲ್ಬಹುದೆ ರಾಘವನ ವಾರ್ತೆಯಂ |
ಕಟಕಿಯೋ ಮೇಣ್ಬಱಿದೆ ಬಟಲಿಸದಿರಿಂತೆನಗ |
ಕಟ ಕಂಡುದೆಲ್ಲಿ ನೀನವನೊಳನುಬಂಧಮೆಂತಾದುದೇನೆಸಗುತಿಹರು ||
ಅಟವಿಯಿಂ ಪೊಱಟಹರೆ ಬಹರೆ ದಾರಿಯೊಳೇಂ ಪೊ |
ಱಟುದಿಲ್ಲವೇ ರಾಮನೊಳ್ಳಿತಾಗಿಹನೆ ಪ |
ರ್ಯಟನದಿಂ ಬಾಡಿಹರೆ ಬರುತುಮಿರ್ಪರೆ ಬಹರೆ ಬಂದರೇ ಪೇಳೆಂದನು
|| ೩ ||

ವ್ಯಸನಮೇಕೆಲೆ ಧೈರ್ಯಮುಡುಗದಿರ್ ತನ್ನಾಣೆ |
ಪುಸಿಯಲ್ಲ ಬರ್ಪನೀವಾರ್ತೆಯಂ ನಿನಗೊಲ್ದು |
ಬೆಸಸೆಂದು ರಾಘವಂ ಪೇಳ್ದಿಟ್ಟೊಡೆ ಬಂದೆನೆನ್ನ ಪರಿಯಂ ಕೇಳ್ವೆಯಾ ||
ಅಸುವಾಗಿ ಜಗಕೆ ವಿಷ್ಣುವಿಗೆ ಸಖನಾಗುತೊ |
ರ್ದೆಸೆಯಾಣ್ಮನೆನಿಪ ಮಾರುತನ ಪೊಲಬುಂಟೆ ತಾ |
ನೊಸೆದಂಜನಾದೇವಿಯೊಳ್ ಪಡೆದ ಹನುಮನೆಂದೆಂಬರೆನ್ನಂ ಜಗದೊಳು ||೪||

ವನದೊಳಿರೆ ಸತಿಸೋದರರ್ವೆರಸು ರಾಘವಂ |
ದನುಜನೊರ್ವಂ ಕೈತವದೊಳುಯ್ಯಲಬಲೆಯಂ |
ಮನಮುಱುಗಿ ಪುಡುಕಿ ಬರೆ ಬರೆ ತನ್ನ ಸೈಪೊಡರ್ಚಲ್ಕಿಂತು ಕೂಟಮೆಮಗೆ ||
ದಿನಪಾತ್ಮಸಂಭವಂ ಬಯಸಲಾದುದು ಬೞಿಕ |
ಮನುವರದೊಳಸುರನಂ ಗೆಲ್ದು ಮೇಣರಸಿಯಂ |
ತನಗೊಪ್ಪೆ ತರ್ಪನಕ ಸೇವಿಸಲ್ ಕರೆವರೆನಗಾರಾಮದೂತನೆಂದು || ೫ ||

ನೊಂದನಗ್ರಜಗಡಸಿಡೆಡರ ನೆನೆನೆನೆದು ತಱು |
ಸಂದನೆಂತಿರ್ದೊಡಂ ಬರ್ಪುದಕೆ ಮನಮುಱಿದು |
ಮುಂದೆಸೆಯ ಹನುಮನೊಡನೆಂದನೆಲೆ ವೀರ ಸೀನೇ ಧನ್ಯನಿಳೆಗೆ ನಿನಗೆ ||
ವಂದಿಸುವೆನ್ನೆ ರಾಮದಾಸಂಗೆ ದಾಸನಾ |
ನಂದಿಂದಿಗುಂ ನೋಂತುದಿಲ್ಲ ನಿನ್ನೋಲ್ ಬೞಿಲಿ |
ಬಂದೆ ಸಾಹಸಿಯಹುದು ವಿಶ್ರಮಿಪುದೆಂದು ಕುಳ್ಳಿರಿಸಿದಂ ಪೀಠವಿತ್ತು || ೬ ||

ತನತನಗೆ ಪರ್ಬಿದುದು ರಾಘವನ ವಾರ್ತೆ ಪ |
ತ್ತನದೊಳೆಲ್ಲೆಲ್ಲಿಯುಂ ಕತ್ತುರಿಯ ಪೊಱೆ ಮಾರು |
ತನ ಕರದೊಳಿತ್ತಂತೆ ಮುನ್ನಗಲ್ದಿನನ ಬರವಂ ತೋರ್ಪರುಣನ ನೋಡೆ ||
ಮನಮೊಲಿವ ಬೆಳ್ದಾವರೆಗಳಂತೆ ಬೞಿಕ ಹನು |
ಮನ ಕಂಡು ಸಂತಸಂ ಮಿಗೆ ಸೇರ್ದು ಮನ್ನಿಸುತು |
ಮನತಿದೂರದೊಳಿರ್ದು ಬೀಸಿದರ್ ಪೂಸಿದರ್ ಕೆಲಬಲದಿ ನೆರೆದ ಜನರು ||೭||

ವರಮುನಿಪ ಲಾಲಿಸೈ ವಿಪಿನದಿಂ ನಡೆತರ್ಪ |
ವರನೀಕ್ಷಿಸಲ್ಕೆಂದು ಕಾಮಿನೀಜನಗಳ್ ಕು |
ವರರನೊಡನೆತ್ತಿಕೊಂಡಿರದೆ ಚೆಂಬೊನ್ನ ನೆಲೆವಾಡಮಂ ಸಾರ್ದಿರ್ದರು ||
ಸರಸದಿಂ ತಿರ್ದಿ ಬೈತಲೆಯ ಜೋಲ್ಮುಡಿಗೆ ಪೂ |
ಸರಮುಡಿದು ಕಪ್ಪನೊಪ್ಪಂಬೂಸಿ ಕಣ್ಣಿಗವ |
ಸರಕೆ ಕನ್ನಡಿಗಂಡು ಸರಿದು ಮೇಲುದಱ ಸೆಱಗಂ ಸರಿದು ಕೈಗಡಗಮಂ || ೮ ||

ತೊಟ್ಟಿಲೊಳ್ ಪುಟ್ಟ ಮಗು ಪಟ್ಟಿರಲ್ ಮುಟ್ಟಿ ವೈ |
ನಿಟ್ಟಸುತವೊಟ್ಟರೆಂದೊಟ್ಟಗನನಿಟ್ಟವನ |
ಬಿಟ್ಟು ಪಣೆಗಿಟ್ಟು ಪೊಂಬೊಟ್ಟನೆದೆಗಟ್ಟಿಯಾದಿಟ್ಟಿ ಬಿಣ್ಪಟ್ಟವೊಲೆಗೆ ||
ತೊಟ್ಟುಡಿಗೆ ಪಟ್ಟೆ ನೆಱೆದುಟ್ಟುಕೊಂಡೊಟ್ಟಜದ |
ಪಟ್ಟಣಿಗರಿಟ್ಟೆಡೆಯ ಬಟ್ಟೆಯಂ ಮೆಟ್ಟಿ ಬರೆ |
ದಿಟ್ಟಗೆಡೆಗೊಟ್ಟು ಪಿಂದಟ್ಟೊರ್ವಳಟ್ಟಸದಿ ಕೊಟ್ಟಪೊಱಸುಟ್ಟಳಾಗ || ೯ ||

ತೆಳ್ಗದಪದೆಸೆಯೆ ನೇರ್ಪಣೆ ಪೊಳೆಯೆ ಮಿಸುಗೆ ಕೌಂ |
ಕುಟ್ಗಳುಂ ನಸುಬಳ್ಕೆ ಜೋಲ್ದಾಡೆ ಮುಂಗುರುಳೆ |
ಸಳ್ಗಣ್ಣಮಿರ್ದೊಪ್ಪೆ ಕನ್ನದೊಡವಲುಗೆ ಕಂಕಣನಿಸ್ವನಂ ಪೊಣ್ಮರೆ ||
ಬೆಳ್ಗೊಡವೊಲೆಗಳದಿರೆ ಚಮರೆಯೊರ್ವಳ್ ಸವಿರ |
ನೊಳ್ಗಯ್ಯ ಜಂತದಣಿಗೆಯಿನೆತ್ತಿ ಬಾಚಿ ಪೊಱ |
ಟೆಳ್ಗದಗದಿಸೆ ನಡು ಪೊಡರೆ ಜಘನಮುಳ್ಕೆ ಮೆಲ್ಲಡಿ ನಡುಗೆ ಕಡಗಮುಲಿಯೆ || ೧೦ ||

ಪಣ್ಣಿತ್ತು ಪಂಡಿತನನೆಳೆದಳಿರನಿಕ್ಕಿ ಕೆಂ |
ಗಣ್ಣನಂ ಪಾಲೆಱೆದು ಹಂಸನಂ ವತ್ಸಮಂ |
ತಣ್ಣೀರ್ಗುಡಿಸಿ ತೊಱೆದುಮಱೆದು ಮನೆಗೆಲಸಮಂ ಮೇಣ್ ಬೞಲ್ಮುಡಿಯ ತುಱುಬಿ ||
ಸಣ್ಣನಡುವಿಗೆ ಸಡಿಲ್ನಿಱಿಯೊಟ್ಟ ಮೇಲುದಂ |
ತಿಣ್ಣಮೊಲೆಯೆಡೆಗೆ ಬರೆಸೆಳೆದು ಪೊಱಮಟ್ಟೊರ್ವ ||
ಪೆಣ್ಣೈದಿದಳ್ ನುಡಿಗೆ ನಡೆಗೆ ಗಾಡಿಗೆ ಸೋಲಲೊಡನೆ ಗಿಳಿಯಂಚೆ ನವಿಲು || ೧೧ ||

ರತಿಯೆಂಬೊಲರಗಿಳಿಯನೆತ್ತಿ ಕೊಂಡೊರ್ವೆ ಭಾ |
ರತಿಯೆನಲ್ ಬಾಜಿಸುವ ವೀಣೆವಿಡಿದೊರ್ವಳ್ ನಿ |
ರತಿಶಯದಿ ಸಿರಿಯಂತೆ ಕಮಲಮಂ ಪಿಡಿದೊರ್ವಳಿಂತುಮೋರೊಂದೆಡೆಯೊಳು||
ಮತಿಮನವನಪ್ಪೆ ಕೌತುಕಮಾಗೆ ಬರ್ಪ ವಸು |
ಮತಿಯಧೀಶ್ವರರಾಘವನ ನೋೞ್ಪೆವೆಂದು ತಾ |
ಮತಿಬಲಾಯನದೊಳೀಕ್ಷಿಸುತ ಸೌಧಾಗ್ರದೊಳ್ ಬಾಲೆಯರ್ ನೆಲಸಿರ್ದರು || ೧೨ ||

ಪಸುರೆಲೆಯ ಬೆಲ್ಲವತ್ತಂಗೆತ್ತು ಸೂಡಿ ಮುಡಿ |
ಗಸವಸದೆ ಕಪ್ಪೆಂದು ಕತ್ತುರಿಯ ಕಣ್ಗಿಕ್ಕಿ |
ಪೊಸಕುಂಕುಮಂ ಬಗೆದು ಪಣೆಗಿಟ್ಟು ಚಂದ್ರಮಂ ಕಾಂಚಿಯಂ ಗಳಕಮರ್ಚಿ ||
ಒಸೆದಡ್ಡಿಗೆಯ ನಡುವಿಗಳವಡಿಸಿ ಪಾಲೆಂದು |
ಬಿಸಿಗಾವಿಗೆಯೊಳಿಟ್ಟು ಮಥಿತಮಂ ಪವಡಿಸಿದ |
ಪಸುಗೂಸನುೞಿದು ಪಡಿಗಟ್ಟಿ ನಡೆದಳ್ ಕಾಂಬ ತವಕದಿಂ ಬರ್ಪವರನು || ೧೩ ||

ಮನನಮಂ ಮಾಣ್ದು ಪುಸ್ತಕವನೊತ್ತಿಟ್ಟು ಜಾ |
ಣ್ಮನದಾಟಪಾಡುಪಂತಂಗಳಂ ಮಱೆದು ಮೇ |
ಲಿನವಸರದೂೞಿಗಂದೊಱೆದು ತುಱುವಿಂಡನೊತ್ತಟ್ಟಿನೊಳ್ ಬಿಟ್ಟು ಜವದಿ ||
ಅನಘರತಿವೀರರಪ್ರತಿಮಕುಶಲರ್ ದೀನ |
ಮನರಗ್ರಜನ್ಮಬಾಹುಜವೈಶ್ಯಪಾದಜರ |
ತನಯರ್ರೈತಂದರಾಮ್ನಾಯಗೋಚರನನಧಿರಾಜನಂ ನೋೞ್ಪೆವೆಂದು || ೧೪ ||

ಮುದ್ದುಮೊಗಮಿರದೆ ನಸು ನಗೆ ಬೀಱೆ ಕಾಲ್ಗಡಗ |
ಸದ್ದುಗುಡೆ ಪದಕಮುಯ್ಯಲನಾಡೆ ಕೂಡೆ ಸರ |
ಮುದ್ದುಮೊಲೆದೊಪ್ಪೆ ಪೊಂಜರಿಗೆ ತೋಳ್ಗಿಸೆಯೆ ಕೈಬಳೆ ಸಮಂ ತೋಱೆ ಬೞಿಕ ||
ಪೊದ್ದು ದುಗುಲವನುಟ್ಟು ಪೊಸಧೋತ್ರಮಂ ಬಣ್ಣ |
ಮುದ್ದಿದೊಳ್ಪಿಡಿಗೋಲ ಪಿಡಿದು ಸಂಗಡಿಗರೊಡ |
ನೆದ್ದು ತಿರಳಿದನೊರ್ವ ಬಾಲಕಂ ಬರ್ಪರಾರೆಂಬುದಂ ನೋೞ್ಪೆನೆಂದು || ೧೫ ||

ಮುತ್ತಿನ್ನೈಸರವನೊಪ್ಪಂ ಸರಿದು ಪಿಂಜಗುಟಿ |
ಲುತ್ತರಿಗೆಯುಂ ಸಮಂ ತಿರುಪಿ ಕಾಲ್ಸಡ್ಡೈಸ |
ಲೆತ್ತಿ ಬಿಡುನಿಱಿಯ ನಡುಸಡಿಲೆ ಸವನಿಸಿ ಪೊಱಟು ಬೀದಿಯೊಳ್ ಪೋಪರೊಡನೆ ||
ಮತ್ತೊರ್ವ ತರಳನೊಟ್ಟಾದನಿಂತೆಲೆ ಮೌನಿ |
ಸತ್ತಮನೆ ರಾಘವಂ ಬರ್ಪನೆಂಬೀವಾರ್ತೆ |
ಗೊತ್ತರಿಸಿ ಪುರಜನರ್ ಕಾಟ್ತೊಱೆಯನೆಱೆಯಂತೆ ಹನುಮನೆಡೆಯೊಳ್ ನೆಱೆದರು || ೧೬ ||

ಅಕ್ಕ ಪೇೞಾರವಂ ರಾಘವಂ ಬರ್ಪವಂ |
ರಕ್ಕಸನೆ ನರನೆ ದೇವನೆ ಸುಂದರನೆ ನೋಡೆ |
ಚಿಕ್ಕವನೆ ವೃದ್ಧನೇ ತರುಣನೇ ಶೂರನೇ ದೊರೆಯೆ ಕರುಣಿಯೆ ಸುಗುಣಯುತನೆ||
ಒಕ್ಕಣಿಸು ತನಗೆ ಧಾರ್ಮಿಕನೆ ಪಗೆವನೆ ಧುರದಿ ||
ಸೊಕ್ಕಿಗನೆ ತಕ್ಕವನೆ ನಿಕ್ಕುವಮೆ ಬರ್ಪುದೆಂ |
ದಕ್ಕಱದೆ ಮುಗ್ಧೆಯೊರ್ವಳ್ ನೆಱೆದ ಸಖಿಯರೊಳ್ ಕೇಳ್ದೊಡೆಂದಳ್ ವಿದಗ್ಧೆ || ೧೭ ||

ನರನಂತೆ ತೋರ್ದು ದೇವರ ದೇವನೆನಿಸಿ ಸಂ |
ಗರದಿ ರಕ್ಕಸರನಿಕ್ಕುವನಂತೆ ಕಣ್ಗೆ ಸುಂ |
ದರನೆಣಿಸೆ ಕಿಱಿಯನೋಪಳ್ಗೆ ತರುಣಂ ಜ್ಞಾನವೃದ್ಧನತಿಶೂರನಿಳೆಗೆ ||
ದೊರೆಯಧಿಕಧಾರ್ಮಿಕಂ ಪಗೆಗಳ್ಗೆ ಪಗೆವನೆಲೆ |
ತರುಣಿ ತನ್ನವರೊಳುಱೆ ಸೊಕ್ಕಿಗಂ ಸೊಕ್ಕಿಗರಿ |
ಗಱಿಯೆ ಸುದ್ಗುಣಮಣಿಯ ಬಣ್ಣಿಸಲ್ಕೆಂದು ಮಾನ್ರ್ಮಡಿದಳವಳೀಂ ಪ್ರೌಢೆಯೋ || ೧೮ ||

ಪೋದರಿತ್ತಣಿನೆಂದು ದಕ್ಷಿಣಕೆ ಕೆಲಬರೀ |
ಹಾದಿ ಬರ್ಪುದಕೆಂದು ಪಶ್ಚಿಮಕೆ ಮೇಣರೆಬ |
ರಾದಿಪಟ್ಟಣಕಿದೆಂದುತ್ತರಕೆ ಪೂರ್ವಮೆಂದುಱಿದವರ್ ಪೂರ್ವದಿಶೆಗೆ ||
ವಾದಿಸುತ ನೋೞ್ಪ ನೆವದಿಂ ಪೋದರಿಂತು ಕೆಲ |
ರಾದುದಿಲ್ಲೆಂದು ಸುತ್ತುವರೆತ್ತಲುಂ ಪಲರ್ |
ಕಾದಿರ್ದರೊಗ್ಗುತೆ ಸಿಲಿಂಪದೆಸೆಯುಂ ನೆರೆದ ಜನರೊಳ್ ತವಕಮೆಂತುಟೋ || ೧೯ ||

ನೋಡುವರ್ ದೆಸೆಯೆಂಟನೊರ್ಮೆ ಮೇಣೊರ್ಮೆ ಮಾ |
ಱಾಡುವರ್ ತಮತಮಗದೇಂ ಬಾರನೆಂದೊತ್ತು |
ಗೂಡುವರ್ ನೆರೆದೊರ್ಮೆ ಪೆಱಗೊರ್ಮೆ ಜನರ ಗದ್ದಲಮಾಗೆ ರಯಮೊಪ್ಪಿರೆ ||
ಓಡುವರ್ ಮನದೊಳಱಿಯಾಸೆಯುಱಿದೇ ಸರಿದು |
ಪಾಡುವರ್ ನಲಿದು ಬಱಿಕೊರ್ಮೆ ಮತ್ತೊರ್ಮೆ ಬೆರ |
ಲೇಡುವರ್ ದೂರದೊಳ್ ಬರ್ಪವರ ಕಂಡು ಬರ್ಪವರೆಂದು ವನವನುಱಿದು
|| ೨೦ ||

ವಾದ್ಯಮೊಂದೆಡೆಗೆ ಭೋರ್ಗುಡಿಸೆ ಪೆಣ್ಜಾಣ್ಣುಡಿಯ |
ದಾದ್ಯಂತಮುಡುಗದುಱೆ ಪೆರ್ಚೆ ಕೋಲಾಹಲಮು |
ಭೇದ್ಯಮೆನೆ ಬಾಲಕರ್ಕಳಧಿಕ ಕಳಕಳಮುಣ್ಮೆ ಕೌತುಕಂ ಜನವನೊತ್ತೆ ||
ಚೋದ್ಯಮೇನೊರೆವೆಂ ವಸಿಷ್ಠನೊಂದೆಡೆಗರ್ಘ್ಯ |
ಪಾದ್ಯಗಳನೆತ್ತಿ ಪೆಱತೊಂದೆಡೆ ಸುಮಂತ್ರಸಚಿ |
ವಾದ್ಯರ್ ಪಿಡಿದು ಚಮರಮಂ ಪೊಱಟರಿಂತು ಕಂಡೆಂದನಾಪವನಸೂನು ||೨೧||

ಸಂತಮಿರ್ಪುದು ಸರ್ವರಿತ್ತಲಂಬರದತ್ತ |
ಣಿಂ ತಡೆಯದ್ವೈತರ್ಪರೆಂಬನಿತಱೊಳ್ ಭಕ್ತ |
ರೆಂತೊರೆದೊಡಂ ತನ್ನ ಬಿರುದೊದಗಿ ಬರ್ಪುದೆಂಬಧಿಕಮಹಿಮೆಯೊ ರಾಮನ ||
ಸಂತತಂ ನಿರುಪಾಧಿಯಿಂ ಪೊಳೆವ ಮುಕ್ತಿಸೀ |
ಮಂತಿನಿಯ ಬೈತಲೆವಣಿಯೊ ಪರಂಜ್ಯೋತಿಯೊ ಮ |
ನಂ ತೊಡರದೆಂಬೊಲೆತ್ತಂ ಪುದಿದುದಾಗಸದೊಳೆಸೆವ ಪೊಸಪೊಳಪದೊಂದು
|| ೨೨ ||

ಬಿಸುಗದಿರನಾಗೆ ತಿರ್ಯಕ್ಚರಂ ಮೇಣ್ ವಿಭಾ |
ವಸುವಾಗಲೂರ್ಧ್ವಜ್ವಲನ ತೋರ್ಪ ಪೊಳಪಿದೆ |
ಣ್ದೆಸೆಗೆ ಮುಸಗಿರ್ಪುದೆತ್ತಣಿನೆಂದು ಕಣ್ಬಗೆಗೆ ಬಗೆಕಣ್ಗೆ ಸೋಲಲಿಂತು ||
ಬಿಸವಂದಮಾಗೆ ಸರ್ವರ್ ಬಱಿಕನುಕ್ರಮದಿ |
ನಸುಕೀಟ್ಪರಿಯೆ ಪಾಱಿದೆಂದು ಜನರೆಂದು ತಾ |
ನೊಸಗೆ ಪರ್ಬಿದುದು ರಾಘವ ಬಂದನೆಂದು ಪುಷ್ಪಕಮವನಿಗಿಱಿದು ಬರಲು
|| ೨೩ ||

ಉರ್ಬೆ ನೆಱೆ ಜನರ ಸಂತಸಗಡಲ್ ನಗೆಜೊನ್ನ ।
ಪರ್ಬೆ ಬಾಲರ ಸುಮಂತ್ರಾದಿನಾಯಕರೞಲ್ ।
ಮುರ್ಬೞಿಯೆ ನೀಱೆಯರ ಕಣ್ಬಕ್ಕಿ ನಲಿಯಲ್ ಭರತನ ಬಗೆನ್ಮೈದಿಲರಳೆ ॥
ಒರ್ಬಗೆಬೆಮರ್ವನಿಯುನಿಬರೊಳೆತ್ತಂ ತೋರ್ದು ।
ಪರ್ಬಿ ಮೈನವಿರಗೆಯದೊಪ್ಪಿರಲೊಸಗೆಗಮ್ಮ್ರ ।
ಲರ್ಬಿಡದೆ ತೀಡಲಾದುದು ರಾಮಚಂದ್ರೋದಯಂ ಬುಧರ ಬಾಯ್ಸವಿಗೆನೆ
॥ ೨೪ ॥

ಕೇಳ್ದಣಿಯೆ ಮುನಿಪ ಬೞಿಕಸುರಾರಿ ತನ್ನವರಿ ।
ನೆೞ್ದು ಪುಷ್ಪಕದಿಂದಮವನಿಗವತರಿಸಿ ಬರೆ ।
ಬಾನ್ದಟಂ ಸೈವಱಿದುದೆಂಬೊಲಾಗಳ್ ಜನರ ಜಯಜಯರವಂ ಪೊಣ್ಮಿರೆ ॥
ಸೂೞ್ದಿರುಗುತಡಿವೇರನೇರ್ದು ಕಾಲ್ಗವಲಿನೊಳ್ ।
ತೊಳ್ದಟ್ಟಿ ಕೊಂಬಿಂಗಡರ್ದು ನಗೆಮೊಗದ ಪಣ್ಣಿ ।
ನೊಳ್ದಿಟ್ಟಿಗೊಂಡುದು ಭರತನ ಕಣ್ಬುರುಳಿ ಬೞಿಕಾರಾಮಸಹಕಾರದಿ ॥ ೨೫ ॥

ತುಂಬಿ ಕೀೞ್ಬರಿವ ಕಣ್ಣೀರೊಳ್ ಮುೞುಂಗಿ ಮೈ ।
ಯಿಂ ಬಸಿವ ಕಿಱುಬೆಮರ್ಸುಪೊಸ ಪೂಸಿ ಭರ ।
ತಂ ಬಲಿದ ನವಿರುಡೆಯನುಟ್ಟು ರಘುರಾಮನಾಮವನಿಟ್ಟು ಮನದಿ ದಿಟದಿ ॥
ಇಂಬುಗೊಂಡಕ್ಕಱೆಯಮರ್ದುಂಡು ತನಗೆ ನೀ ।
ಡುಂ ಬರ್ಪ ತಡೆಯುಸಿರ್ದೇಗಿ ಮೊಗದನುರಾಗ ।
ಮೆಂಬ ನಱುದಂಬುಲಂಸವಿದಗ್ರಜನ ದರ್ಶನೋತ್ಸವಕೆ ಪೊಱಟನಂದು ॥ ೨೬ ॥

ನಡುಕಂ ಪೊದೞ್ದು ಕಡೆಗಾಲ್ಗಳಿಂ ಪರಿದು ನೀ ।
ರ್ದೊಡಕಿಂ ಮಸುೞ್ದು ಬಿಡುಗಣ್ಗಳಿಂ ಪಿರಿದು ಕಂ ।
ಡಡಕಂ ನರಳ್ದು ಪಿಡಿಗೊರಲಿಂ ಕರೆದು ನುಡಿದನಣ್ಣ ಬಾರಣ್ಣ ದೇವ ॥
ಪಿಡಿದೊಡಲಿಗಿನಿತು ದಿನವ್ರತದಿನಿರ್ದೊಡೆ ತನ್ನ ।
ಪಡೆದ ಸುಕೃತದ ಫಲಂ ತೀವಿದೊಡೆ ಸಹಜ ನೀಂ ।
ನುಡಿದ ಮಾತಿಂಗೊದಗಿ ಬಂದೊಡಿಂದಿಗೆ ಧನ್ಯನಾದೆನೆಂದಂ ಭರತನು ॥ ೨೭ ॥

ಆವಗಂ ನಿನ್ನನಾರ್ ಬಗೆವನೆಯನೊತ್ತಿ ಸಂ |
ಭಾವಿಸುವ ತವಸಿಗಳ್ಗೊದಗದೀಯಡಿ ವನ್ಯ |
ಜೀವಿಗಳ್ಗೆಂದುಮಾಸರೆಯಾದುದೇಗಳುಂ ಪೆತ್ತವರ ಕಣ್ಗೊಡರದ ||
ದೇವ ನಿನ್ನಾಟಮಸುರರ್ಗೆ ತೋರ್ದುದು ನಿಚ್ಚ |
ಮಾವೇದವಚನಕೆಂತುಂ ಸಿಲ್ಕದಣ್ಣ ನೀ |
ನೇ ವಿಚಿತ್ರಮಿದಲ್ತೆ ತೊಡರಿ ಬಿಟ್ಟೈ ಕೈಕೆಯೊರೆದ ಬಿಱುನುಡಿಯೊಂದಕೆ
|| ೨೮ ||

ಮಡದಿಮೆದುಗೈಯ್ಯೊತ್ತುವಡಿ ನಡೆಯೆ ಕಲ್ಲೊತ್ತಿ |
ದೆಡೆ ಕಾಡ ಸುತ್ತೆ ಪೂದೋಂಟಮುಂ ತಿರಿವ ಕಾ |
ಲುಡೆ ನಾರನೊಳ್ಪಟ್ಟೆಬಿಗಿವ ನಡು ಪಟ್ಟೆಗೋಲೆಸೆವ ಕೈಯ್ಯ್ಯೊಱುಗೋಲಂ ||
ಪಿಡಿಯೆ ತಿರೆಸಿರಿವೊಱುವ ತೋಳ್ಮಡು ಬಗಲ್ಗಂಟೆ |
ಗೆಡೆಯಾಗಲಿಂತು ಪೊಸಸೊಗವ ನೀನುಂಡುದೇ |
ಕೊಡೆಯ ನಿನ್ನನುಭವಕೆ [ಸರಿಯೆ] ಮೇದಿನಿಯ [ಸೊಗಮುದು] ರಾಘವ
|| ೨೯ ||

ಆಡಿದಂತಯ್ಯನಡವಿಗೆ ಪೋದುದರಿದಲ್ಲ |
ಕಾಡೊಳ್ ತೊಟಲ್ದುದತಿಶಯಮಲ್ಲ ರಕ್ಕಸರ |
ಕೂಡೆ ಕೈಗೈದುದಚ್ಚರಿಯಲ್ಲ ದೇವರ್ಕಳಂ ಪೊರೆಯೆ ದೊಡ್ಡಿತಲ್ಲ ||
ಖೋಡಿ ಘಾತಕಿ ಪಿಶುನನತಿಕೋಪಿ ಪಾಪಿ ಕುಲ |
ಗೇಡಿ ಭ್ರಾತೃದ್ರೋಹಿ ತನ್ನೊಳೊರೆದಂತೆ ಕಾ |
ಪಾಡಲಿಂತೈತಂದುದಿದುವೆ ಪಿರಿದೆಂದು ಕಾಲ್ಗೆಱಗಿದಂ ರಘುರಾಮಗೆ || ೩೦ ||

ಪಿಂಗದನುಜನ ಕಟಾಕ್ಷಿಸಿ ಭಕ್ತರಂ ನೋಟ್ಪ |
ಪಾಂಗದಿಂ ಪಿಡಿದೆತ್ತಿ ತನ್ನನುಜಿ ಮಱಿವೊಕ್ಕ |
ರಿಂಗಭಯಮುಂ ತೋರ್ಪಮುರ್ದುಗೈಗಳಿನಪ್ಪಿ ಸಿರಿಯನಪ್ಪುವ ತೋಳ್ಗಳಿಂ ||
ಅಂಗಸಂಗವನಿತ್ತು ನುಡಿಸಿದಂ ಬಟಿಕ ರಘು |
ಪುಂಗವಂ ಪ್ರಣವನವಮೂಲಸೂಕ್ತಿಗಳೊಗೆದ |
ಡಂಗಿ ನೆಲೆಗೊಂಡ ನಲ್ಬಾಯಿಯಿಂದೆನೆ ಭರತನೇಂ ಕೃತಾರ್ಥನೊ ಧರೆಯೊಳು
|| ೩೧ ||

ಸಹಜ ಕಂಡಿಲ್ಲಮೀರೇೞ್ಕಾಲ ವನದಿ ಕೇಳ್ ।
ಸಹಜಮೀಬನ್ನಮೀೞದೆ ನಿನ್ನೊಲೊರ್ವಗಲ್ ।
ಸಹ ಜಡೆಯ ಪೊತ್ತು ಕಿತ್ತಡಿಯೆಂಬೊಲುಣಿಸುೞ್ದು ಸಿರಿತಿರೆಗಳಂ ಕಾಣದೆ ॥
ದಹನಕೆಡೆಗೈದೊಡಲ ಕಡುದುಗುಡಮಿನಿತು ಮಱೆ ।
ದಹ ನಮಗೆ ಮೇಲ್ಬಯಸಿ ಬಂದೊಡಿಂತಾಸೆಗೈ ।
ದಹನವನಿಯೊಳಗಾವನೈ ಭರತ ನಿನ್ನಂತೆ ಬಿಡುಬಿಡಿಂತೀನುಡಿಯನು ॥ ೩೨ ॥

ತಮ್ಮ ಬಗೆಗನುರಾಗಮಿಂಬಾಗೆ ಬೞಿಕಣ್ಣ ।
ತಮ್ಮಂದಿರೋರೊರ್ವರಂ ಬಿಡದೆ ನಡೆನೋಡು ।
ತುಮ್ಮನಂ ದಣಿಯೆ ನಲ್ನುಡಿಯಿನೊಡಬಡಿಸೆ ರಾಘವನನುಜನಂ ಭರತನು ॥
ಸಮ್ಮತಿಸುತೆಡದ ಭೂಮಿಜೆಗೆಂದನೆಱಗಿ ಲೇ ।
ಸಮ್ಮ ತನಗಾಗಿ ತೊೞಲಿದೆ ಕಾಂತನೊಡನೆ ಮನ ।
ವಮ್ಮದಡವಿಯನಕಟ ಸಿಲ್ಕಿದೌ ರಕ್ಕಸರ ಕೋೞಲೆಗಿನಿತು ಸಾಲದೇ ॥ ೩೩ ॥

ಮೂರ್ವೞಿಯನುದ್ಧರಿಪ ದೇವಿ ನಿನಗೀಯೆಡರ್ ।
ನೂರ್ವಗೆಯೊಳೊರೆಯಲಿಂತೊದವಿದತ್ತಕಟ ತ ।
ನ್ನೊರ್ವನಿಂ ಪತಿಪರಾಯಣೆಗೆ ಸನ್ಮಂಗಳೆಗೆ ಸತ್ಯವಾಣಿಗೆ ಜಾಣೆಗೆ ॥
ಉರ್ವರೆಯೊಳನಸೂಯೆಯಂತರುಂಧತಿಯಂತೆ ।
ಪರ್ವಿ ಜಸಮೆಲ್ಲೆಡೆಗೆ ನೋಯಿಸಿದೆನೌ ನಿಮ್ಮ ।
ನಾರ್ವರ್ಪರೆಣೆಗೆ ತನ್ನಂ ಕಾವುದೆನೆ ಮೈದುನಂಗೆಂದಳವನಿಜಾತೆ ॥ ೩೪ ॥

ಬಸವೞ್ದು ಮಱುಗದಿರ್ ನಿರ್ನೆರಂ ಭರತ ನೋ ।
ಯಿಸುವರಾರ್ ನೋವರಾರ್ ಬಗೆಯೆ ಮುಮ್ಮೈಮಾೞ ।
ಬೆಸುಗೆ ಗಡ ಸುಖದುಃಖಮಿರದೆ ಪಗಲಿರುಳಂತೆ ಸಹಜಮಿದು ಪುಟ್ಟಿದರ್ಗೆ ॥
ಬೆಸನಮಿಂತೆಮಗೆ ನಾಣ್ನುಡಿಗೆ ನಿನ್ನಿಂದೊದಗೆ ।
ನಸಿನಸಿನಗೆಮ್ಮತ್ತಣಿಂ ತೋಱೆ ಲೋಕದಾ ।
ಯಸಕೊರ್ವನೊರ್ವನಂ ದೂಱೆ ಮರುಳಾಗದೇಂ ಬಲ್ಲವರ್ಗೆಂದೊರೆದಳು ॥
॥ ೩೫ ॥

ಜಾಣೆ ಮಾರ್ನುಡಿಯಲುಸಿಕನೆ ಭರತನಿರ್ದು ತಾಂ |
ಕಾಣಿಸಲ್ಕನುಜಗವನೆಱಗಿದೊಡಮೆತ್ತಿ ಕೈ |
ಮಾಣದಾಲಿಂಗನಂಗೆಯ್ದು ಕಣ್ಕೊಸರೆ ಮನ ಮಱುಗೆ ಪೇೞ್ದಂ ತನ್ನೊಳು ||
ತೂಣಮನಗ್ಗೈದಡವಿಯುಂ ಸಾರ್ದೊಡಂ ಪುರಕೆ |
ಮೇಣೊರ್ಮೆ ಬರ್ಪ ಬಗೆಯಿಂದಾಯ್ತೆ ತಮ್ಮ ಹೋ |
ನಾಣೞಿದನೆನ್ನ ಕಾಂಬೞ್ತಿಯೇಂ ತೋರ್ದುದಣ್ಣನ ಸಾರ್ದವೀರನ್ನೈಸೆ||೩೬||

ಥಟ್ಟನೈದಿದೆ ವಿಪಿನಕಣ್ಣನೊಡನುೞಿದು ಕೈ |
ಗೊಟ್ಟರಸಿಯುಂ ಮಱೆದು ಮಾತೆಯುಂ ನಗರಮುಂ |
ಬಿಟ್ಟು ಸಿರಿ ಸೊಗಸದೊಡನಾಡಿಗರ ತೊಱೆದೆಣಿಸದಪ್ಪ ಸುಖಕಷ್ಟಗಳನು ||
ಪುಟ್ಟಿತೆಂತು ವಿರಾಗಮೆಲ್ಲದಱೊಳಾರಿದಂ |
ನಟ್ಟರೊಡಲೊಳ್ ನಿನಗೆ ಪುರುಳಿಲ್ಲಮೆಂದಂದು |
ಪಟ್ಟಣದೊಳಿರಲಲ್ಲದೊಡೆ ಪುರಾಕೃತಯೋಗಬಲಮೆ ಕೌಶಿಕನೊರೆದನೆ || ೩೭ ||

ನೋಂತುದಿಲ್ಲನುಜ ನಿನ್ನನಿತು ಪಿಮ್ಮೆಯೊಳ್ ನಿ |
ರಂತರಂ ಸೇವಿಸುವೊಡಗ್ರಭವನಂ ಮಾತಿ |
ನಿಂ ತೋಱಿ ಪೇೞ್ದೊಡೇಂ ರೂಪಡಿಸೆೞಲ್ಮಾೞ್ಕೆ ನಿಮ್ಮಿರ್ವರೊಳ್ ತೋರ್ಪುದೈ ||
ಎಂತಟವಿಯುಂ ತೊೞಲ್ದಿರಿ ತಾತನಾಣೆಗೆಯೊ |
ಳೆಂತನಿಬರೊಳ್ ನೇಹಮಾಯ್ತು ಮೇಣಸುರರೊಡ |
ನೆಂತು ಕೈಗೈದಿರಚ್ಚರಿಯೆನಲ್ ಬರ್ದಿದಿರ್ ವೀರಾಗ್ರಗಣ್ಯರೆನಿಸಿ || ೩೮ ||

ನೀರ ಪೊಯ್ಲೊಡನೆ ಪೋಪುದು ಕಾಷ್ಠಮದು ವಲಂ |
ಸ್ವಾರಸ್ಯಮಱಿತಲ್ಲಿ ಲಘುವಿನಿಂ ಕಿಱಿತನದಿ |
ಸೇರಿದಂ ಸರಿದಣ್ಣನಂ ಪೆಱತು ಜಾಣ್ಮೆ ಮಗುೞ್ತಣದು ಗಾಂಪನೆನಗೆ ||
ಆರಿವನ ನೆಲೆಯಱಿತರುಂಟು ತೋರ್ಕೆಗೆ ನಮ್ಮೊ |
ಳಾರಣ್ಯಮಂ ಪೊಕ್ಕೊಡಂ ಮರಳಿ ನಿನ್ನ ಹೃದ |
ಯಾರವಿಂದಂದೊಳೞಿದಡಂಗಿರ್ಪಿನಂ ಭರತ ನಿನಗಾದುದೀಜ್ಞಾನವು || ೩೯ ||

ಮೆಲ್ಪಾತಿನಿಂ ಸುಮಿತ್ರಾತ್ಮಜಂ ಮಣಿದಿಂತೆ |
ನಲ್ವಿಚಾರಂಗೊಂಡನಂತಿರ್ದನಿವನೊಪ್ಪು |
ವೊಲ್ವಾನರರ್ಸಡಿಗೆ ತಲೆದೂಗಿದರ್ ಸಹೋದರರ ಬಗೆಗಾರ್ ಮೆಚ್ಚರ್ರೈ ||
ಸೊಲ್ವಿಡಿದು ಕೇಳ್ ಮುನಿಪ ನಡೆನುಡಿಗಳಿಂ ಮನಂ |
ಸಲ್ವಿನಂ ಪಿರಿಯನಂ ಸೇವಿಸುವ ಸಹಜರಂ |
ಪೋಲ್ವರಾರ್ ಕಿಱಿಯರಂ ಸವಿನುಡಿಯಿನುಪಚರಿಸಿ ಪೊರೆವಗ್ರಜರನಿಳೆಯೊಳು
|| ೪೦ ||

ಬೆನ್ನೊಳಾದೊಡೆಯು ಬಸಿಱಿಂ ಪುಟ್ಟಿದಂತಱಿತು |
ಭಿನ್ನವೆಣಿಸದೆ ತಪ್ಪನೊಪ್ಪುಗೊಂಡೋವಿ ಸಂ |
ಪನ್ನರಂ ಮಾಡಿ ಗುಣಧರ್ಮದೊಳ್ ಬನ್ನಬೇನೆಗೆ ಮಱುಗಿ ನೆಱೆ ಪಾಲಿಸಿ ||
ತನ್ನೊಡನೆ ಕೂಟಕೂಟಕೆ ಕರೆದು ದಣಿದು ಬ |
ರ್ಪನ್ನೆಗಂ ಸಾಸಮಂ ಪೊಗೞಿ ಸರಿಗಜ್ಜದೊಳ್ |
ಮುನ್ನವರೊಳಾಲೋಚನೆಯನೆಸಗಿ ತಮ್ಮಂದಿರಂ ಕಾಣ್ಬನೇಂ ಪೂಜ್ಯನೋ
|| ೪೧ ||

ಪೆಂಡತಿಯ ನುಡಿಗೇಳ್ದು ಬಾಯ್ಗೊಬ್ಬಿನಿಂ ಬೈದು |
ದಂಡಿಸಿ ಪೆಱಗೊರೆದು ಚಾಡಿಯಂ ಕೇಡೆಣಿಸಿ |
ಬೆಂಡಪ್ಪಿನಿಂ ದಣಿಸಿ ಕೂೞಿಕ್ಕದಟ್ಟಿ ಸೋದರರ ಬಸಿಱುರಿಸಲವನು ||
ಕೊಂಡಬ್ಬೆಗಬ್ಬದಿಂ ಪೊಱಟುದಕೆ ಮೇಣ್ ಕರುಳ್ |
ತುಂಡಾಗಿ ಬಂದುದಕೆ ದೇವನಿಂ ಚೊಚ್ಚಲಿಗೆ |
ಗಂಡೆನಿಸಿ ಪುಟ್ಟಿತಕೆ ಪಿರಿಯನೆನಿಸಿದಕೊಳ್ಳಿತಾಯ್ತೆಲ್ಲೈ ಧಾತ್ರಿಯೊಳಗೆ || ೪೨ ||

ಅಂತದಱಿನೊರ್ವನಗ್ರಜನೆನಿಸಿ ಪುಟ್ಟಿ ವಿಧಿ |
ಯಿಂ ತನ್ನ ಪೊರ್ದುಗೆಯ ಹಂಗನುಱೆ ಸಲಿಸಿ ಬಗೆ |
ಮುಂತಱಿತು ಸಹಜರಂ ಪೊರೆವೊಡೆ ಗುಣಂ ಪೂರ್ವಸುಕೃತಿಗಲ್ಲದೆ ಬರ್ಪುದೇ ||
ಎಂತೆಣಿಸಿ ಪೊರೆದೊಡಂ ದೂಱಿ ನೆರೆಪೊರೆಯೊಳು ಸ |
ಮಂತವರ ಕೆಡಕುನುಡಿಗಣ್ಣನೊಳ್ ಪೊಯ್ದಾಡು |
ವಿಂತಹ ಸಹೋದರರ್ಗೇನೆಂಬೆ ವಂಶಕಂಟಕರಲ್ತೆ ಕೂಡಿ ಜನಿಸಿ || ೪೩ ||

ಮನೆಗೆಲಸಮಂ ತೊಱೆದು ಕಂಡಕಂಡೆಡೆ ತಿರಿದು |
ದಿನಗಳೆದು ದುರ್ವ್ಯಸನದಿಂ ಪಿರಿಯಹೂಣೆಯಂ |
ನೆನೆದು ಸರಿಹಸುಗೆಗುಱೆ ಪುರುಡಿ ಬೇಗುದಿಗುದಿದವನ ಸಿರಿಗೆ ಬಲ್ಮೆಯಿಂದಾ ||
ತನ ತಪ್ಪ ಬಗೆಯೊಳಟ್ಟುಳಿಗೆಯ್ದು ಸಾರ್ದನ್ಯ |
ರನೆ ನಚ್ಚಿ ಬಱಿದೆ ಪಗೆಗೊಂಡಣ್ಣನಂ ನೋಯಿ |
ಪನುಜರ್ಗೆ ಗುರುದೇವರೊಲ್ಮೆಯಪ್ಪುದೆ ತಪ್ಪದೆಂದೆಂದಿಗುಂ ನರಕವು || ೪೪ ||

ಪಿರಿಯನಂ ಪಿತನಂತೆ ಬಗೆದಕ್ಕಱಿಂ ಗುಣಂ |
ಪೊರೆಯೆ ಭಯಭಕ್ತಿಯಿಂ ಸೇವಿಸುತೆ ವೇಳೆಯಳ |
ವಱಿತು ನುಡಿದುತ್ತರಕೆ ಮಾರ್ನುಡಿಯದೊಪ್ಪಿ ತಲೆವಾಗಿರ್ಪುದುಚಿತಮಂತು ||
ಮಱೆದಾದೊಡಂ ಪುಸಿಯನುಸಿರದೊರ್ಕಟ್ಟನಿಂ |
ಪರರಿಗೆಡೆಗೊಡದಿರ್ಪಿನಂ ಸೇರ್ದು ಕಣ್ಣೋಟ |
ದಿರವಿನೋಲ್ ಪೊಂದಿರಲ್ಕವನೆ ಪಾವನನೇಕೆ ಪಲಬರೊರ್ವಂ ಸಾಲದೇ ||೪೫||

ಪುಟ್ಟೆ ಬಸಿಱೊಳ್ ಪಿರಿಯನಾದಬ್ಬೆಗುಂಡು ಬಾ |
ಯ್ದೊಟ್ಟವಂ ಸವಿದ ಮೊಲೆಯಂ ಪಟ್ಟು ಮೇಣವನ |
ತೊಟ್ಟಿಲೊಳ್ ಪರಿದವಂ ನಡೆದೆಡೆಯೊಳಾಡಿ ಬಳೆದವನಂತೆ ಮಾತುಗಲಿತು ||
ಒಟ್ಟನಿಂ ಬಿಜ್ಜೆಬಿನ್ನಣವಱಿತು ತನ್ನಣ್ಣ |
ಗಟ್ಟುಳಿಯನೆಸಗುವನೆ ಸೋದರಂ ತಪ್ಪು ಮುಂ |
ಬಟ್ಟೊವೆರ್ಗೆಯ್ದೊಡಂ ಮಱೆದು ಕಾಣ್ಬನೆ ಪಿರಿಯನೆಳೆಯೊಳ್ಕೆಗಲ್ತೆವಡೆದು
|| ೪೬ ||

ಮೇಲೆ ಸೀತಾರಾಮಲಕ್ಷ್ಮಣರ್ ಭರತನಂ |
ಲಾಲಿಸಿ ಪೊರೆದು ಮಣಿದು ಸಂತೈಸಿ ಒಱಿಕ ಮುನಿ |
ಪಾಲ ಕೇಳ್ ಗುರುವಸಿಷ್ಠಂಗೆಱಗಿದೊಡೆ ಪರಸಿ ಮೂವರಂ ಪಿಡಿದೆತ್ತುತ ||
ಸಾಲದೇ ನರನಾಟಕದೊಳಸುರರಂ ಗೆಲ್ದು |
ಲೀಲೆ ಭೂಮಿಜೆಯೆನಿಸಿ ಪತಿಭಕ್ತಿಯಂ ತೋರ್ದ |
ಶೀಲ ಪೊಱೆಗಳ್ಕೆ ಸೋದರನಾಗಿ ಪುಟ್ಟೆ ನೆರವಾದ ಸಾಹಸವೆಂದನು || ೪೭ ||

ಪ್ರಚುರಮುನಿನಾಥನಿಂತೆನಲುಪಚರಿಸಿ ವೃದ್ಧ |
ಸಚಿವನಂ ಕೂರ್ಮೆಯಿಂ ನುಡಿಸಿ ಕುಶಲವ ಕೇಳ್ದು |
ಸಚರಾಚರಾತ್ಮಕಂ ಪ್ರಜೆಗಳಂ ಮುಂತಿರ್ಪರಂ ಕಟಾಕ್ಷಿಸಿ ತನ್ನೊಳು ||
ಉಚಿತಮಲ್ಲಿರ್ಪುದಬ್ಬೆಯ ಕಾಣದಿನ್ನು ಕಪಿ |
ನಿಚಯದೊಡನೈದುವೆಂ ಪುರಕೆಂದು ಭರತಂಗೆ |
ವಚಿಸಿದೊಡೆ ಮಂತ್ರಿಸುಮುಖನನಟ್ಟಿದಂ ಮುಂದೆ ಸಿಂಗರಂಗೆಯ್ವುದೆಂದು || ೪೮ ||

ತನ್ನೊಡೆಯನಾಣೆಯಿಂ ಪುರಕೆ ಸುಮುಖಂ ಬರ್ಪ |
ಮುನ್ನಮೀವಾರ್ತೆ ಪರಿದತ್ತಯೋಧ್ಯೆಗೆ ನಾಡು |
ಚೆನ್ನಪ್ಪಿನಂ ಸಿಂಗರಂಗೆಯ್ದರೇಂ ಪೌರಜನರ ಭಕ್ತಿಯೊ ದೊರೆಯೊಳು ||
ಪೊನ್ನೆಲಂ ನೆಲದ ಕೆಲಬಲದಿ ಘಟ್ಟಿಸೆ ನಿಂದ |
ರನ್ನಗಂಬಂ ಕಂಬಗಳ ಮೇಲೆ ಬಿಗಿದಿಹ ಸ |
ಮುನ್ನತಮಹಾಮಂಡಪಂ ಮಂಡಪಂಗಳಿಂ ಬೀದಿಗಳ್ ಚೆಲ್ವಾದುವು || ೪೯ ||

ಉಪ್ಪರಂ ಕಣ್ಗೆಸೆವ ಪಚ್ಚೆಜಂತಿಯ ಮೇಲೆ |
ಚಪ್ಪರದ ನೀಲವಲಗೆಯ ಕರ್ಬೊಳೆಪನಱಸ |
ಲಿಪ್ಪವೆನೆ ತೋಱ ಬಜ್ಜರರನ್ನಬುರುಡೆಗಳ್ ಸಾಲ್ಗೊಂಡುವೆಡೆಯೆಡೆಯೊಳು ||
ಮುಪ್ಪುರಿಯ ಪವಳಮಾಲೆಗಳ ಬಱವಱಯೊಳೊಡ |
ನೊಪ್ಪುಗೊಂಡಾಣಿಮುತ್ತುಗಳ ಝಲ್ಲರಿಯ ಮನೆ |
ದಪ್ಪದೋರಣವ ಮಣಿಮಂಡಪಂ ಕಣ್ಗೆ ಕೌತುಕಮಾದುದಾನಾಡೊಳು || ೫೦ ||

ಸಲ್ಲಲಿತರಾಜವೀಧಿಗಳೊಳೆರ್ಕಡೆಮನೆಗ |
ಳೆಲ್ಲೆಡೆಯ ಮಕರತೋರಣವೊಪ್ಪಿದತ್ತು ಸಿರಿ |
ಬಲ್ಲಹನ ಕೂರ್ಮೆಗಡಲೊಡೆಯೆ ನೆಱೆಗಿಟ್ಟ ಬಿಡುಗಂಡಿಗಳೆನಲ್ಕೆ ನಡುವೆ ||
ಅಲ್ಲಿಗಲ್ಲಿಗೆ ಮುತ್ತುಮಣಿಯಿಂ ಬರೆದ ರಂಗ |
ವಲ್ಲಿ ಪೊನ್ನೆಲ್ಲದಿ ನಾಡರಸಿ ಬರ್ಪೊಡೆಯಂಗೆ |
ಮೆಲ್ಲಡಿಗೆ ಪಾಸಿಕ್ಕಿದುಟ್ಟ ಪೊಂಬಟ್ಟೆಸೆಱಗಿನ ಜಱಯೊಲೆಸೆದಿರ್ದುದು || ೫೧ ||

ಅಂತರದೊಳಿರ್ಪ ಪೊಸಕುರುಜು ಕಣ್ಗೊಂಡುದು ವ ।
ಸಂತರಾಜಂ ಸರ್ವಫಲಗಳಂ ಕೂಡಿ ನಲ ।
ವಾಂತು ರಾಘವನ ಕಾಣ್ಕೆಗೆ ಕಟ್ಟಿಸಿದ ಚೈತ್ರರಥಮೆನಲ್ ಫಲಭಾರದಿ ॥
ಮುಂತೆ ಮೊಗವಾಡದಿರ್ಕೆಲದ ಪೂಸರದ ತಳಿ ।
ರಿಂ ತುಱುಗಿ ತೋರ್ಪ ತೋರಣದ ಸಾಲ್ವಿಡಿದು ನೇ ।
ಲ್ವಂತೆ ಸರಿಗೊಂಡ ಮೆದುವಳ್ಳಿಗಳ ಶೋಭೆಯಿಂ ಪುರವೀಧಿಯೊಳ್ ಪೊಸತೆನೆ ॥ ೫೨ ॥

ಚೆಚ್ಚರಂ ಬರೆ ನಾಡ ಸಿಂಗರಕೆ ಸುಮುಖದಣಿ ।
ಯಚ್ಚರ್ಯಗೊಂಡವರ ರಾಜಭಕ್ತಿಗೆ ಮನಂ ।
ಮೆಚ್ಚೆ ಮೇಲಪ್ಪ ಸನ್ನೆಯುಮೆಸಗಿ ಕಾದಿರ್ದರೆಲ್ಲೆಲ್ಲಿಯುಂ ಪುರದೊಳು ॥
ಪೆಚ್ಚಿದತ್ತೊಸಗೆ ವಾತ್ಸ್ಯಾಯನಮುನೀಶ ಮುಂ ।
ದೆಚ್ಚಱಿರ್ ಪೇೞ್ವುದಕೆ ನಾಡುಗರ್ ಪೊಱಟು ಕಾ ।
ಟ್ಪೊಚ್ಚದೋಲ್ ನೆಱೆದಿಱುಂಪೆಯ ಹಂತಿಯೆನಲಿದಿರ್ಗೊಳಲ್ಕೈದಿದರ್ಮುಂದಕೆ ॥ ೫೩ ॥

ಇತ್ತಲನಿತಱೊಳಖಿಳರಿಂ ಕೂಡಿ ರಾಘವಂ ।
ಪತ್ತಿ ಪುಷ್ಪಕದೊಳೈತರುತಿರಲಯೋಧ್ಯೆ ತೋ ।
ರ್ದತ್ತಂದು ಶರಣನಭಿಷೇಕಸಮಯಕೆ ಸಿಂಗರಂಗೊಂಡ ಲಂಕೆಯಂತೆ ॥
ಹತ್ತಿರಕೆ ಬರೆವರೆ ಪುರದ್ವಾರದೊಳಗೆ ಗೆಲ ।
ವೆತ್ತು ಸೂೞ್ಪೈಪ ಒಹುವಾದ್ಯಘೋಷಮಿದಲ್ಲಿ ।
ಮತ್ತವನ ಕಳಿಪಲೊಡವಿದ ವಿಭೀಷಣನಧಿಕವಾದ್ಯಘೋಷದೊಲಾದುದು ॥ ೫೪ ॥

ಒಂದೆಡೆಗೆ ಕೊಂಬು ಪೆಗ್ಗಾಳೆ ಕುಡುವಳೆ ಸಂಕ ।
ವೊಂದೆಡೆಗೆ ಭೇರಿ ತಂಬಟೆ ಡಕ್ಕೆ ಪರಿಗೆ ಡೋ ।
ಲೊಂದೆಡೆಗೆ ತಾಳ ಮದ್ದಳೆ ಗಂಟೆಯೊಂದೆಡೆ ಕೊಳಲ್ ವೌರಿ ಸುತಿ ಮುಗುೞ್ದು ॥
ಒಂದೆಡೆಗೆ ವೀಣೆ ಸಾರಂಗಿ ತಂಬುರಿಯಿಂತು ।
ಸಂದಣಿಸಿ ಪೂರೈಸೆ ಮೊೞಗೆನಲ್ ಗಗನಕೆಂ ।
ಟುಂ ದೆಸೆಗೆ ಗಜದ ಬೃಂಹಿತಮೆನಲ್ ಪುದಿದುದರ್ಣವಕೆ ಪೆರ್ಮೊಱೆಯೆನಲ್ಕೆ ॥ ೫೫ ॥

ಅಟ್ಟಿಯಿಂ ಪಥವಿಡಿದು ಬರ್ಪ ಬಂದಟ್ಟಿಕಱಿಂ |
ನರ್ತಿಪ ನಲಿದು ಕೂಡಿ ಕೀರ್ತಿಪ ಸಮಂತು ಸಂ |
ಕೀರ್ತಿಸಿ ಮನಂಗೊಳ್ವ ಮನಗೊಂಡು ಕಾಣ್ಬ ಕಂಡೆತ್ತಲುಂ ಸುತ್ತುವರಿವ ||
ಕೂರ್ತು ಪರಿದೆಣೆಯರಂ ಸೇರ್ವ ಸೇರ್ದವರೊಡನೆ |
ದಿರ್ತಿರುಗಿ ಪೋಪ ಪೋಗಿತ್ತ ಬಹ ನೋಡೆಂದು |
ವರ್ತಮಾನವನೊರೆವ ಪುರಜನರ್ ಕಣ್ಗೆ ಗೋಚರವಾದರಾ ರಾಮಗೆ || ೫೬ ||

ಮುಂದೆ ನಾರುಡೆಯಿನೆಳೆವಾಸಿನಿಂ ಪೆರ್ಜಡೆಯಿ |
ನೊಂದುಣಿಸಿನಿಂ ನೋಂತ ಪಾರ್ವ ಬಳಗಂ ಮನಂ |
ಗುಂದಿ ಸಿಂಗರಬೇಂಟೆಯುಡಗುಬಿಲ್ಗಣೆಗಳಂ ತೊಱೆದ ರಾಜನ್ಯನಿವಹಂ ||
ಸಂದ ಭಕ್ತಿಯೊಳೆ ಬೇರವನುೞಿದ ಬೇರಿಗರ |
ವೃಂದಮುೞಲಿಂ ಮೇಲವರ ಸೇವೆಗೆಯ್ದೆ ಪೋ |
ದಂದಿನಿಂ ಬಾೞ್ದ ಪಾದಜನಿಚಯಮುಂದು ಕಾಣಿಸಿತು ರಕ್ಕಸವಗೆಯಗೆ|| ೫೭ ||

ನೆಲನ ಸೋಂಕಲ್ ವೇಗಮುಡುಗಿ ಮೇಣ್ ಪುಷ್ಪಕಂ |
ಮಲಯಜದ ಕಂಪುವೊಱೆಯಾಂತು ನಡೆತರ್ಪ ಮೆ |
ಲ್ಲೆಲ್ಲರ ಗತಿಯಂತೆವೋಲ್ ಮಂದಗತಿಯಿಂ ಪರಿದು ಸಕಲರೊಡನಾರಾಮನು ||
ಕೆಲಕೆಲಿಱಿದು ಬಂದನನಿತಱೊಳೆ ಭೂದೇವಸಂ |
ಕುಲವೇದಘೋಷಮತಿಶಯವಾಗೆ ಜಯರವಂ |
ಸಲೆ ಪೆರ್ಚೆ ಸುರರ ಬಿನ್ನಪದೊಳೇಱಿದನರಸಿಯೊಡನೆ ಪೊನ್ನಂದಣವನು
|| ೫೮ ||

ಸುತ್ತಿರಲ್ ಕಪಿವರರ್ ಮಾಗಧರ್ ಮುಂಪೆ ಕೈ |
ಯೆತ್ತಿ ಪೊಗೞುತ್ತಿರಲ್ ಸಹಜರೆಡಬಲದಿ ಬೀ |
ಸುತ್ತಿರಲ್ ಚೌರಿಯಂ ವಿಪ್ರಗಡಣಂ ವೇದಸೂಕ್ತದಿಂ ಸ್ತುತಿಸಿ ಬರಲು ||
ಮುತ್ತಿರಲ್ ಪೌರಜನರೆಲ್ಲೆಡೆಯೊಳಲ್ಲಲ್ಲಿ |
ವೃತ್ತಕುಚೆಯರ್ ಬೆಳಗುತಿರಲಾರತಿಯ ಮುಂದೆ |
ಕೆತ್ತುಕೊಂಡಿರಲಧಿಕವಾದ್ಯರವಮೆಸೆದನಂದಣದಿ ಸೀತಾರಾಮನು || ೫೯ ||

ಮಣಿವ ಬಲವರ್ಪ ಪಾಡುವ ನೋಡುವಾಸೆಯಿಂ |
ಕುಣಿವ ಪರಸುವ ಸೇವೆಗೆಯ್ವ ನುಡಿಸುವ ಬವಣಿ |
ಯೆಣಿಸಿ ಮಱುಗುವ ಸಂತಸಂಗೊಳ್ವ ಪೊಸಬಿನದಮಂ ತೋರ್ಪ ಮೌನಮಿರ್ಪ ||
ಅಣಿಯುರಂ ಫಲಕುಸುಮಗಳ ಸಮರ್ಪಿಸುವ ಬೆಲೆ |
ವಣಿಗಳಂ ಕಾಣ್ಕೆಗಳನೀವ ಜನರೊಡನೆ ಮೆಱೆ |
ವಣಿಗೆಯಿಂ ರಾಜವೀಧಿಯೊಳಟ್ಟಿಯಿಂ ರಾಘವಂ ಮುಂದೆ ಬರುತಿರ್ದನು
|| ೬೦ ||

ಮುಗಿಲಟ್ಟಣೆಯೊಳಿರ್ದು ಮುಕ್ತಾಫಲಂಗಳಂ |
ಗಗನದಿಂ ಸುರಿವರಚ್ಚರಸಿಯರೆನೆ ಬಾಲೆಯರ್ |
ಮಿಗಿಲೆಡ್ಡಮಪ್ಪ ಪೇರಾನೆಗಳನೇರ್ದು ಸೇಸೆಯನಿಕ್ಕಿ ನೋಟ್ಪರಲ್ಲಿ ||
ಉಗುವ ಮದಧಾರೆಯಂ ಮುತ್ತಿವರ್ಪಳಿಗಳೊಡ |
ನೆಗೆದು ಮೈಗಂಪಿಗವರಂ ಬಳಸಿ ಮುರಳಿಸುವ |
ಬಗೆಗೆ ಕೈದಿರುಹಿ ಕಣ್ಗೊನೆಯೂಡಿ ಬೆಡಗಿನಿಂ ನರಯಾನದಿರ್ಕಡೆಯೊಳು ||೬೧||

ಸಾಲಿನುಪ್ಪರಿಗೆಯಂ ಸಾರ್ದು ಕಟ್ಟೆಟ್ಕಱಿಂ |
ಲೋಲಾಕ್ಷಿಯರ್ ಭಗಣಮಧ್ಯದೊಳ್ ರೋಹಿಣೀ |
ಬಾಲಚಂದ್ರಮರಂತೆ ಮೆಱೆವ ಸೀತಾರಾಮರಂ ಪೌರಜನರ ನಡುವೆ ||
ಆಲಿಸುತ ತಮ್ಮೊಳೆತ್ತಣ ಕೋಮಲಾಂಗಂ ವಿ |
ಶಾಲನೇತ್ರಂ ಹಸನ್ಮುಖಮಧಿಕಸೌಂದರ್ಯ |
ಮಿಾಲೋಕಕತಿಶಯಮಿವರ್ಗೆಂದು ಬಾಯ್ದಣಿಯೆ ಪೊಗಟ್ವರ್
ಬೆಗಡುಗೊಂಡು || ೬೨ ||

ಕುಲಮಂ ಸುಶೀಲಮಂ ಸೌಂದರ್ಯಮಂ ಬಾಹು |
ಬಲಮಂ ವಿವೇಕಮಂ ಕೌಮಾರಮಂ ನಿಜೋ |
ಜ್ಜ್ವಲಶೌರ್ಯಮಂ ಭೂತದಯೆಯಂ ಪ್ರಭಾವಮಂ ಗುರುಭಕ್ತಿಯಂ ನಿಷ್ಠೆಯಂ
ಎಲೆ ಭಗಿನಿ ರಾಘವನೊಳಿನಿತೆಣಿಸದಾತನ್ನ |
ಛಲವಿಡಿದು ನಗರದಿಂ ಪೊಱಡಿಸಿದ ಪಾಪಿ ಭೂ |
ತಲದಿ ಕೈಕೆಯೆ ಕೈಕೆ ಪೆಣ್ಗಳೊಳಗೆಂದು ಸುಯ್ದೊರ್ವಳೊರ್ವಳ್ಗೆಂದಳು || ೬೩ ||

ದಾರಿಯೊಳ್ ಹರ್ಮ್ಯಾಗ್ರದೊಳ್ ನಿಂತು ನೋೞ್ಪ ಪುರ |
ನಾರಿಯರ ಸಲ್ಲಾಪಮಂ ಕಂಡು ಮಣಿವ ಪರಿ |
ವಾರಮಂ ಕರುಣಿಸಿ ಸಮಸ್ತವಿಪ್ರಸ್ತೋಮಮಂ ಕಟಾಕ್ಷಿಸಿ ತನ್ನನು ||
ಸಾರಿ ಬಹ ಸಾಮಂತರಾಯರಂ ಮನ್ನಿಸಿ ವಿ |
ಚಾರಿಸಿ ಜಘನ್ಯಜರನಂತ್ಯಜರ ಸೇವೆಯಂ |
ವೀರರಾಘವನೊಪ್ಪಿ ಸೋದರರ್ವೆರಸು ಕಪಿನಿಚಯದೊಡನೈತಂದನು || ೬೪ ||

ಪಡೆದನಂ ಕಂಡಂತೆ ಭರತನೊಂದೂರ್ಗೆ ಪೋ |
ದೊಡೆಯನಂ ಕಂಡಂತೆ ನೀಱೆಯರ್ ದ್ವಿಜರಲ |
ರ್ವೊಡೆಯನಂ ಕಂಡಂತೆ ದಿಗ್ವಿಜಯಮೊಸಗೆ ಬರ್ಪರಸನಂ ಕಂಡಂತಿರೆ ||
ನಡೆತರ್ಪ ಮಿಕ್ಕುೞಿದವರ್ ಕಂಡು ಸಂತಸದ |
ಕಡಲೊಳೞ್ದಿರೆ ದೇವತತಿ ಪೊಗೞೆ ಗಾಡಿಯಿಂ |
ದುಡುಪಪುರದೊಡೆಯ ಲಕ್ಷ್ಮೀಮನೋಹರನೊಡನೆ ನಿಜನಗರಿಯಂ ಪೊಕ್ಕನು || ೬೫ ||

## ಐದನೆಯ ಸಂಧಿ

ಸೂಚನೆ ॥ ಮಾರ್ತಂಡಕುಲಲಲಾಮಂ ರಾಘವಂಗೆ ಸುಮು ।
ಹೂರ್ತದೊಳ್ ಪಟ್ಟಾಭಿಷೇಕಮಾಯ್ತಾನಂದ ।
ಪೂರ್ತಿಯಿಂ ನಿರ್ಜರರ್ ತಮಗೊಡರ್ಚಿದ ಸುಖಕೆ ಪೊಗಟಿಲ್
ಕೃತಜ್ಞರಾಗಿ ॥

ಮುಂಗತೆಯನೊರೆವೆನಾಲಿಸುವುದೆಲೆ ಮುನಿಕುಲೋ ।
ತ್ತುಂಗ ವಾತ್ಸ್ಯಾಯನನೆ ಬರುತಿರ್ದನಾಗ ರಘು ।
ಪುಂಗವಂ ಸಕಲರೊಡನರಮನೆಗೆ ಬಟ್‌ಕಿತ್ತಲಂಬೆ ಕೌಸಲ್ಯೆ ಸುತನಾ ॥
ಸಂಗತಿಯನಜ್‌ಯದೆಣಿಕೆಯೊಳೇಗಳುಂ ಮನ ಕ ।
ರಂಗಿ ಪೂಮುಜ್‌ದ ತಾವರೆವಳ್ಳಿವೋಲ್ ಬಾಡಿ ।
ತಂಗೆಯಂ ಬೈದು ವಿಧಿಯಂ ಜಱೆದು ಭೋಜನಂದೊಱೆದು ಮೈಮಱೆದು
ಮೊರೆದು ॥ ೧ ॥

ಪಿಂದೆ ಬಲ್ನೋಂಪಿಸಗಲಂತದಱ್‌ನಾಮುದ್ದು ।
ಕಂದನಂ ಪಡೆದ ಗಡ ಮೈಯಿದಱೊಳೇಂ ಪಾಪ ।
ಮಂ ದುಡಿದೆನೋ ಮಾಯವಾದನಣುಗಂ ಕೈಗಮರ್ದ ಮಣಿಯುಡುಗಿದಂತೆ ॥
ಎಂದಿಗೆ ಮುಗುಟ್ದಿನ್ನ ಕಣ್ಣಕ್ಕವಕ್ಕಿಯಾ ।
ನಂದಿಪುದೊ ರಾಮಚಂದ್ರನ ಕಂಡೆನುತ್ತುಮೆಳೆ ।
ಗಂದಿಹಸು ಕಣ್ಮಱೆಯ ಕಱುವನಾರೈವಂತೆ ಹಂಬಲಿಸುತಿರ್ದಳಿಂತು ॥ ೨ ॥

ಸಖಿಯರಿಂದಱ್‌ತು ದೇವಿಯರಿರವನಾಗಳ್ ಸು ।
ಮುಖನೊಯ್ಯನೈದಿ ಕಂಡೆಱಗಿ ಪೇಟ್ದಂ ತಾಯೆ ।
ಮುಖರಕ್ಷಕಂ ಜಾನಕೀವಲ್ಲಭಂ ಪಿತೃವಚನಪಾಲನಿಂದ್ರಜಾರಿ ॥
ನಿಖಿಲಮರ್ಕಟನುತಂ ಖರಕುಂಭಕರ್ಣಪ್ರ ।
ಮುಖದಾನವಾಂತಕಂ ಶರಣಾರ್ಥಿತಪ್ರದಂ ।
ಸುಖದೊಳೈತಂದನನುಜಂಬೆರಸು ಸತಿಸಹಿತಮಿದೆಕೊ ನೋಡೇಟ್ವುದೆಂದು ॥ ೩ ॥

ನುಡಿಗಬಲೆ ತಾನೆದ್ದು ಬಯಕೆ ಪಿರಿದಾಗಲಡಿ |
ಗಡಿಗವನೊಳಾರ್ಶೈದು ವಾರ್ತೆಯುಂ ರೋಮಾಂಚ |
ಮೊಡನೆ ತಲೆದೋಱು ಮೈಯೆಱೆ ಸಂತಸದ ಕಂಬನಿ ಪೇಱ ಮೋರೆಯರಳೆ||
ಕಡೆವಗಲ ಜಾದಿಮಲ್ಲಿಗೆಯಂತೆ ನಸುನಸುಂ |
ಪೆಡಮೆಟ್ಟಿ ದುಗುಡಮುರುಹೋಪಯಪ ಮರ್ಬಿನೋಲ್ |
ಕಡುತವಕದಿಂ ನಿರೀಕ್ಷಿಸುತಿರ್ದಳಾತ್ಮಜನ ಬರವನಿತ್ತಲ್ ರಾಮನು || ೪ ||

ದಂಡಿಗೆಯನೇರ್ದು ಬರೆ ಕೈಕೆಯರಮನೆಗಿದಿ |
ರ್ಕಂಡಿಱದು ಪೊಕ್ಕೊಳಗೆ ಪಣಿಮುಗುಡಗದಿರ್ದಗಲ್ |
ಕಂಡ ಪೊಳಪಿಂ ಬೆಳಗುವಡಿದಾವರೆಗೆ ಪುರುಡಿ ಕೊರೆಗೆ ಕಣ್ಣೈದಿಲಿಂತು ||
ದುಂಡುಮೊಗಸಸಿ ಕಂಡು ಕಂದಿತೆನೆ ತಾಯಡಿಗೆ |
ಮಂಡೆಯಂ ಬಾಗಿರ್ದೊಡಂ ಕಣ್ಮಲರ್ಗಳಿಱು |
ಗೊಂಡು ಬಾಡಿರಲಬಲೆ ನುಡಿಸದಿನಿಸುಂ ನೋಡದಿರ್ದಳತಿಲಜ್ಜೆಯಿಂದ || ೫ ||

ಮಾತನಾಡಿಸದಿರಲ್ ಕೈಕೆ ಬೞಕೆಂದನೆಲೆ |
ಮಾತೆ ನಿನ್ನಾಜ್ಞೆಯಂ ಮೀರ್ದನಲ್ಲಿನ್ನೆವರ |
ಮಾತೆಱವೆ ಮುಂದೊಂದುಮೊಂದಿಗುಂ ನಡೆಯದಿರ್ಪೆಂ ಸಿದ್ಧಮಂತಲ್ಲದೆ ||
ನೂತನಂಬೇೞ್ವೆನೆಂದೆಣಿಸದಿರ್ ನಿನ್ನಾತ್ಮ |
ಜಾತನೆಂದೇ ಬಗೆದು ಬಾಲಬುದ್ಧಿಯೊಳಿಂತು |
ನಾ ತಿಳಿಯದೆನ್ನವಗುಣಂಗಳಿರೆ ಮಱೆದು ಪಾಲಿಪ್ಪುದಿಂತಿಂತಿರಲ್ಕೆ || ೬ ||

ಸೆಱೆಗೆಯ್ದುದೇನೌ ಕರಾಬ್ಜಮಿಾಗಲ್ಲಮಂ |
ಬರೆವೆಱೆಯನಕ್ಷಿನೀಲೋತ್ಪಲಂ ಪಾದನಖ |
ಕಿರಣವಿರುಚಿಯನೇಂ ಪಗೆದು ಕಾಣ್ಬುದು ಕಂಬುಕಂಧರಂ ಬಾಹುಬಿಸದಿ ||
ಒಱಗಿರ್ಪುದೇಕೆ ನಾಸಿಕಚಂಪಕಸುಮುಕುಳ |
ಮರಳಿ ಮುಗಿದಪುದೇಕೆ ಸುಯ್ಬಿಸುಪಿನಿಂ ಕುರು |
ಳ್ಗಱುಮುಗಿಲ್ ನಿಟಲಾಂಬರದಿ ಕೆದರ್ದಿರ್ಪುದೇತಕೆ ನಿಜಂಬೇೞ ಮಾತೆ || ೭ ||

ಕತ್ತುರಿಕರಂಡಬಾಯ್ಮನೆಯೊಳಗೆ ದಾಳಿಂಬ |
ವಿತ್ತುವಲ್ಗಾಪಿಟ್ಟು ತೊಂಡೆವಣ್ದುಟಿದೆಱೆಯು |
ನೆತ್ತಲುಂ ಬಿಗಿದು ಮುತ್ತುಗದಳಿನಾಲಗೆವಣೆಯೊಳಿರ್ದು ಬಾಸೆವೆಣ್ಣು ||
ಮತ್ತೀನನೆಸಗಿದಪಳಿನಿಯನಾಲೋಕದಿಂ |
ದಿತ್ತಲೈತಂದೊಡನೆ ನೆಲಸಿಪ್ಪುದೆಂದೇಕ |
ಚಿತ್ತದಿಂ ಮೌನಗೊಂಡಭವನಂ ಧ್ಯಾನಿಪಳೆ ವ್ರತಮೆನಿತು ಪೊಱ್ತಿಪ್ಪುದು|| ೮ ||

ನೋಡುನೋಡೌ ಭರತ ನಿನ್ನಣುಗನೆಱಗಿದಪ |
ನಾಡಬಾರದೆ ಪರಸಿ ಹಿತವಚನಮಂ ಮುಂದೆ |
ಜೋಡಿಸಿರ್ಪಂ ಕರವನೆಳೆಯನೀಲಕ್ಷ್ಮಣಂ ಕುಳ್ಳಿರಲುಸಿರಬಾರದೇ ||
ಕಾಡಂ ತೊಱಲ್ದು ಬಲ್ಬನ್ನವಡೆದೀಬಾಲೆ |
ಬಾಡಿ ಬಂದಿಹಳಿವಳ ಸಂತೈಸಬಾರದೇ |
ಬೇಡುವೆಂ ರಾಮನಾನಾಣತಿಯನೆನೆ ಕೈಕೆ ಮೆಲ್ಲಾತಿನಿಂದೊರೆದಳು || ೯ ||

ವನಕೆ ಪೋಗೆಂದ ಪಾಱ್ಪಾಯ್ ಮಗುೞ್ ಬಂದೊಡೆಂ |
ತೆನಿತುಪಚರಿಪುದಂದು ಪೋಪ ಸೊಬಗಂ ಕಂಡು |
ತನಿವೆರ್ಚಿದಱಗಣ್ಗಳೈತರಲ್ಕೆತ್ತಿ ಕಂಡುಪುವೆ ಮತ್ತೆಂತು ನಿಮ್ಮ ||
ಮನದಱಲನುೞ್ ನೋಡಿ ಬೀಗಿದೀಸುಡುಮೋೞ್ |
ಮನೆಗೆ ಸಂತಸದಿ ಬರ್ಪಂದು ಕಾಣಿಪುದೆ ಮಾ |
ತಿನ ಜಂಬಮೇಕೆ ಕೇಡೆಣಿಸಿರ್ದ ಮೂಱ ನಿಮ್ಮಭ್ಯುದಯಮಂ ನೋೞ್ಪಳೇ || ೧೦ ||

ಕೀೞುಮೇಲಱಯದೆ ಮರುಳ್ತನದೊಳೊರ್ವ ಕೇ |
ಡಾಳಿ ತಾನೊರೆದ ಬಿಱುನುಡಿಗೆ ಪೋಪುದೆ ಮಹಾ |
ಭೀಳಕಾನನಕಂತು ಪೋದೊಡಂ ಮರಳಿ ಬರೆ ಪೇೞ್ದುಟ್ಟಲಾಮಾತನು ||
ಕೇಳದಿರ್ಪುದೆ ಪುರಾಕೃತದೋಷಮಿಂತೆನ್ನ |
ನೇಱಸಿತು ಬಱದಾಡಿ ಪುರುಳದೇಂ ಕಂದ ಪಿಂ |
ಬಾೞುವೆಯು ಮಱೆವುದೆಂದಪ್ಪಿ ಕುಳ್ಳಿರಿಸಿದಳ್ ಕೈಕೆ ದುಮ್ಮಾನದಿಂದ || ೧೧ ||

ತಾಟಕಾಂತಕನಾಗಳಿಂತೆಂದನೆಮಗೆ ಪೂ |
ದೋಟದಂತಾಯ್ತಡವಿ ರಕ್ಕಸರೊಳನುವರಂ |
ಬೇಟೆಯಂತಾದುದೀರೇೞ್ಗಲಮೋಱೆಟ್ಟಿಗೆಯೆನೆ ಖಳರುಪಟಳಂ ||
ಆಟಕಿಮ್ಮಡಿಯೆನಿಸಿ ತೋರ್ದುದಾಪೊೞಲೊಳೀ |
ಪಾಟಲಾನನೆಗೆ ನಿನ್ನೊಲ್ಮೆಯಿಂ ಮೇಣ್ ಜಟಾ |
ಜೂಟನಾರೈಕೆಯಿಂದೆಂದು ಸಂತೈಸಿ ಪೊಱಟರ್ ಸುಮಿತ್ರೆಯನಱಿಯಲು || ೧೨ ||

ಚಿತ್ರವಸ್ತುಪ್ರಕರದಿಂ ಕಣ್ಗೆ ಶೋಭಿಪ ಸು |
ಮಿತ್ರೆಯರಮನೆಗೈದಿ ಕಂಡವಳ್ಗೆಱಗೆ ಶತ |
ಪತ್ರಲೋಚನೆ ಕಿಚ್ಚುಗಿಟ್ಟ ಬೆಳ್ಳಿಯ್ಯಂತೆ ಮನಗರಗಿ ಪಿಡಿದೆತ್ತುತುಂ ||
ಕ್ಷತ್ರಧರ್ಮಂಬಿಡದೆ ಚಿರಕಾಲಮುವನಿಯುನ |
ಮಿತ್ರರಿಲ್ಲೆನೆ ಪೊರೆವುದೆಂದು ರಾಘವನಂ ಸು |
ಪುತ್ರವತಿಯೆನಿಸಿ ಬಾೞೆಂದವನಿಜಾತೆಯುಂ ಪರಸಿ ಲಕ್ಷ್ಮಣಗೊರೆದಳು || ೧೩ ||

ಮುನ್ನಮೀ ರಾಘವನ ಸೆಱಗಿಗಿತ್ತೆಂ ಕಾವ |
ವನ್ನೀವುಬಾವಿನೊಳ್ ನಿನಗೆಂದು ತಾನದಱಿ |
ನಿನ್ನೆನ್ನ ಪರಕೆ ಪೆಱತಿರದಣ್ಣನೇ ದೈವಮೆಂದು ಗುರುವೆಂದು ಬಗೆದು ||
ಎನ್ನೆಗಂ ಬಿಡದೆ ಪದಸೇವೆಯಂ ಚಿರಕಾಲ |
ಬನ್ನಮಿಲ್ಲದೆ ಮಾಳ್ಪುದೆಂಬುದಿಂತಲ್ಲದೆಂ |
ದುನ್ನತಾಸನಕೆ ಕರೆದುಯ್ದಪ್ಪಿ ಮೂವರಂ ಕುಳ್ಳಿರಿಸಿ ಮಗುೞೆಂದಳು || ೧೪ ||

ಕಾಡಿಗಗ್ರಜನೊಡನೆ ಪೋಪೆನೆಂದೆನ್ನನುಱೆ |
ಕಾಡಿ ಮೈಮೆಯನೊಡಂಬಡುವಂತೆ ತನಗೆ ಬೞಿ |
ಕಾಡಿ ಬೆಂಬತ್ತಿ ನಿನ್ನಂ ಸೇರ್ದ ಲಕ್ಷ್ಮಣನನಂತಲ್ಲವಡವಿಯೊಳಗೆ ||
ಬೇಡರಂ ಕಂಡು ಬೆರ್ಚುವೆ ಬಾಲೆ ತನ್ನೊಡನೆ |
ಬೇಡ ಬರ್ಪುದು ಕೋೞ್ಮೃಗಂಗಳಿರ್ದಪುವೆಂದು |
ಬೇಡಲವನಿಜೆಯನೊಲ್ಲದೆ ನಂಬಿ ಬಂದವಳನೆಂತೋವಿದೈ ರಾಘವ || ೧೫ ||

ವನವಾಸಮೆಣಿಸೆ ಬಲ್ಪನ್ನಮಂತದಱೊಳ್ ಭು |
ವನಮಱಿಯೆ ಸತಿಯಗಲ್ಕೆಯೆ ಪಿರಿದು ಬನ್ನವಾ |
ವನಧಿಯಂ ಕಟ್ಟಿ ಲಂಕೆಗೆ ಪೋಪುದತಿಬನ್ನಮಂತಸುರರೊಳ್ ಪೊಣರ್ದು ||
ವನಿತೆಯಂ ಪಿಂತರ್ಪುದೀಡಿಱಿದ ಬನ್ನನೋ |
ವನಿತನೊಳಕೊಂಡೆನ್ನ ಕಂದನಂ ಪೊರೆದು ಪಾ |
ವನಿಸಿ ಕರತರ್ಪುದೇ ಬನ್ನಬನ್ನದೊಳೆಂದು ನುಡಿಯೆ ರಾಘವನೆಂದನು || ೧೬ ||

ಆವನೆಮ್ಮಂ ಕಾದನಂತು ಪಗಲಿರುಳೊಳಿ |
ನ್ನಾವನಂ ಮಱಿದೆವೊಡನುಣಿಸಿಗೆಂದುಂ ತಿಳಿಯ |
ದಾವನಿಂ ತ್ರಿದಶರ್ಗೆ ಬಾಗದಸುರರ್ಮಡಿದರಾವಂಗೆ ಗೆಲವಾದುದು ||
ಆವನ ಪರಾಕ್ರಮದೊಳಬಲೆ ಮೇಣ್ ಕೈಸೇರ್ದ |
ಳಾವನೊಳ್ ಭ್ರಾತೃವಾತ್ಸಲ್ಯಮಿರ್ದಪುದು ನಿ |
ನ್ನಾವತ್ಸ ಲಕ್ಷ್ಮಣನೆ ಪೇೞಬಲ್ಲಂ ತಾಯೆ ವಿಭವಮುಂ ವನವಾಸದ || ೧೭ ||

ಸವಿನುಡಿಯ ಸೊಗಸು ನಿರಹಂಕಾರಭಾವಮೊ |
ಪ್ಪುವ ಮಾತೃಭಕ್ತಿ ಮುಪ್ಪುರಿಗೊಳಲ್ ಪಲ್ವಿಳಗು |
ಕವಲೊಡೆಯೆ ದೆಸೆದೆಸೆಗೆ ಮನ್ನಿಸಿ ಸುಮಿತ್ರೆಯುಂ ಪರೆಕೆಗೊಂಡೊಡನೆ ಪೊಱಟು||
ಕವಿದು ರಿಂಗಣಗುಣಿದು ಸುೞಿದಾಡಿ ತಾಯೆಡೆಗೆ |
ಜವದಿಂ ಮರಳ್ವ ಕಱುವಂತೆ ಸಂತಸದೆ ರಾ |
ಘವನಾಗಳೈತಂದನಬ್ಬೆಯರಮನೆಗೆ ಮನ್ನಿಸಿ ನುಡಿಸಲೆಂದು ಭರದಿ || ೧೮ ||

ಮುಗಿದರಳಿ ನೋೞ್ಪ ಕಣ್ಗಳ ಬಿಗಿಸಡಿಲ್ವ ಪು |
ರ್ಪುಗಳ ಬೆಮರೊಡೆದು ನೆಱೆದುಬ್ಬುವಾನನದ ಪೊ |
ರ್ದುಗೆಗೊಂಡ ಜೆಡೆಯ ತೊಡವಿಲಿಕೊಡಂಕೆಯ ಕುಗ್ಗಿ ನೇರಮೆಟ್ಟಿಪ್ಪ ಗಳದ ||
ಸುಗಿದೊಗೆದ ಮೆಯ್ಯ ಸೀತ್ಕರಗೊಂಡು ಭಾವಿಸುವ |
ಬಗೆಯ ನಿಜಮಾತೆಯಂ ರಾಘವಂ ರಾಹು ಕೈ |
ದೆಗೆದ ಶಶಿಯಂತೆಸೆವ ರಾಮನಂ ಕುಶಲೆಯುಂ ಕಂಡರೋರೊರ್ವರಾಗ ||೧೯||

ಸೆಱಗೊರಲ್ ನಡುಕಂ ನಿಮಿರ್ಗೂದಲೆಱೆಮಸಂ |
ಕಿಱುಬೆಮರ್ ಸೊಗದ ಕಂಬನಿ ಬನ್ನದೞಿವು ಜೇ |
ಸಱಿದೞಿವು ಮೋಹಮೊಗದೊಳ್ಪು ಮೈವೆಳ್ಪು ತಳೆದೋರ್ಪುದಿರ್ವರೊಳೊರ್ಮೆಯೆ ||
ಪಿರಿದೆನೆ ಪರಸ್ಪರಮುಖಾವಲೋಕನದಿನೀ |
ತೆಱದೊಳನ್ಯೋನ್ಯದರ್ಶನಸುಖಂ ನಾಡೆ ದಾ |
ಶರಥಿಕೌಸಲ್ಯೆಯರ ದರ್ಶನದ ಸುಖದಂತೆವೋಲಾದುದೆಣೆಗಾಣದೆ || ೨೦ ||

ಕಿತ್ತಡಿಯ ಜನ್ನಮಂ ಕಾದು ಪೆಣ್ಗೈದಡಿಯಿ |
ನೊತ್ತಿ ಕಲ್ಲಂ ಹರನ ಬಿಲ್ಮುಱಿದು ಭಾರ್ಗವನ |
ನೊತ್ತಟ್ಟಿಗುೞಿದಯ್ಯನಾಣೆಯಂ ಬಿಡಪಡವಿಯಂ ಸಾರ್ದು ಕೀಶರ್ಕಳ ||
ಮೊತ್ತಮಂ ಪೊರೆದು ಕಡಲಂ ಕಟ್ಟಿ ದಾನವರ |
ನೆತ್ತರಂ ಚೆಲ್ಲಿ ತಿರೆವೊಱೆಯಿೞಿಸಿದ ಜಸವಂ |
ಪೊತ್ತ ಭಾರಕೆ ಸಿರಂ ಬಾಗಿತೆನೆ ಮಾತೆಯಡಿಗೆಱಗಿದಂ ಶ್ರೀರಾಮನು || ೨೧ ||

ಅಡಿಗೆಱಗಲೆತ್ತಿ ಕಂದನನಪ್ಪಿ ಪಿಡಿದು ನೈ |
ದಡವಿ ಕೈಯಿತ್ತು ಕುಳ್ಳಿರಿಸಿ ಪಲವುಂ ಪಗಲ್ |
ಪೊಡವಿಯಂ ಪೊರೆದು ಬೞಿಯಂ ಬೆಳಗಿ ಬಾೞ್ವಿರೆಂದಪ್ಪೆ ಬಾಯ್ದಣಿಯೆ ಪರಸಿ ||
ಕಡುಪಾಪಿಗೆನಗೇಕೆ ಪುಟ್ಟಿದೈ ನೀಂ ಕೈಕೆ |
ಯೊಡಲೊಳಾಗದೆ ಪಾತಕಿಯನಟ್ಟುವಂತೆ ಪೇ |
ರಡವಿಗಟ್ಟುವೊಡೆ ನಿನಗಂದು ಕಂಬನಿವಣಿಸರಂ ಪೇಱೆ ಮೊಳೆಗೆಂದಳು ||೨೨||

ಮಕ್ಕಳಂ ಪಡೆದೋವಿ ಬಾಲಲೀಲೆಯನಂತು |
ಪೆಕ್ಕಳಂ ಕಂಡು ಮುದ್ದಾಡಿ ನಲ್ನುಡಿಗೆ ಸೆವ |
ದಕ್ಕಜಂಗೊಂಡಾವಗಂ ಫಲದಿನೊಪ್ಪುವೆಳೆದೆಂಗಿನಂತಣುಗರೊಡನೆ ||
ಚಿಕ್ಕಜೌವನೆಯೆಸೆಯಲವಳ ಸೈಪುಂ ನಗೆಗೆ |
ಪಕ್ಕಾಗೆ ತನಯರಂ ಪಗೆದಟ್ಟೆ ತಾನೊರ್ವೆ |
ಸೊಕ್ಕಿ ಮಿಡಿಯುಡಿದ ಮರನಂತಿರ್ಪ ಕಕ್ಕಸಿಯ ಸೈಪುಮೆಣೆಯಲ್ತೆ ಮಗನೆ || ೨೩ ||

ಮಿೞ್ತುವಾದೊಡಮುಂಟು ಕಾಣ್ಬುದಣುಗನನೆನ್ನ |
ಬಾೞ್ತಿನೆಯ ಕಿಱುಮಱಿಯನೊದೆದಟ್ಟಿ ಮೇವ ಪೆ |
ಣ್ಗೞ್ತೆಯಂ ಗೆಲೆವಂದುದೆಂದು ಕಂಬನಿ ಮಗುೞ್ದುಂಬೆ ರಾಘವನೆಂದನು ||
ಪೊೞ್ತಿಲ್ಲಮಿದು ತಾಯೆ ದುಃಖಿಸಲ್ ನಿನಗೆ ನೀ |
ನೞ್ತಿಯಿಂ ನಡೆವೇೞ್ದು ಪೊರೆವುದಂತಲ್ಲದೆ ನೆ |
ಗೞ್ತೆವಡೆದೆಮ್ಮ ಜನಕನ ನುಡಿಗೆ ಪಾವನಂ ತಾನಾದೆನವನಿಯಱಿಯೆ ||೩೪||

ಒಯ್ಯರದ ಮಾತಲ್ಲ ಮಾತೆ ನೀ ಪರಸಲೆ |
ಣ್ಮಯ್ಯವಂ ಕರುಣಿಸಲ್ ಕೈಕೆಯಟ್ಟಿದೊಡಮೆ |
ವ್ಮಯ್ಯನುಱಿದೊಡಮಡವಿಯೊಳ್ ಬವಣೆಗೊಂಡೊಡಂ ರಕ್ಕಸರ್ ಬಱಲಿಸಿದೊಡಂ ||
ಕಯ್ಯಡ್ಡಗಟ್ಟೆ ಮೇಲ್ವಾಯ್ದು ದುಃಖಾಂಬುಧಿಯ |
ನೊಯ್ಯನೆ ಸಡಿಲ್ದು ದಾಂಟಿದೆವು ಮೇಣ್ ಬಿನ್ನಪಂ |
ಸಯ್ಯಡಿಯೊಳೆಱಗಿ ಪೇೞ್ದಪೆನೆನುತ್ತೆ ರಾಘವಂ ಮತ್ತೆ ಜನನಿಯೊಳೆಂದನು || ೩೫ ||

ಎನ್ನತೆನಗಕ್ಕುಮೆಂದಾವಗಂ ಕಂದನಂ |
ನನ್ನಿ ಮಿಗೆ ಪೊರೆದಬ್ಬೆಯಂ ಸೇವಿಸದ ತನುಜ |
ನಿನ್ನವಂ ಸುತನಲ್ಲಮಂತು ರೇತೋಜಾತಕೀಟಂ ವಲಂ ನೋೞ್ಪೊಡೆ ||
ಮನ್ನಿಪುದು ತಾಯೆ ಬಹುಕಾಲ ಸೇವಿಸದಿರ್ದು |
ದನ್ನೆಯಮಿದಂ ಕೊರ್ಮೆಯಿಂ ಜಸಂ ಸೈಪುಮೆ |
ನೆನ್ನೆಗಂ ಬಿಡದೆ ತನಗಪ್ಪಂತೆ ಬುದ್ಧಿಯಂ ನೆಱೆ ತಿಳಿಪಿ ನೀ ಕಾವುದು || ೩೬ ||

ಮಗನ ನುಡಿಬಿನ್ನಣಕೆ ಸಂತಸಂದಾಳ್ದು ಕ |
ಣ್ಮಗಿಯದಿನಿಸುಂ ಕಂಡು ಮತ್ತೆ ಭೂಜಾತೆ ಪದ |
ಯುಗಕೆ ಶಿರಮಂ ಬಾಗಿರಲ್ ಸೊಸೆಯನಂತು ದಿಟ್ಟಿಸಿ ಮುಟ್ಟಿ ಭುಜಲತೆಯನು||
ನೆಗಪಿ ಶಿರಮಂ ಮೂಸಿ ಕೊರಲನಿರ್ತೋಳ್ಗಗಳಿಂ |
ಬಿಗಿದಪ್ಪಿ ಮೋಹಮೊತ್ತರಿಸೆ ಕುಳ್ಳಿರಿಸಿ ಬ |
ಲ್ಪಗೆಯೊಳುಪಚರಿಸಿ ಮೇಣ್ಪರಸಿ ಮೆಲ್ನುಡಿದೋಱೆ ಸೀತೆಯೊಳೆಂದಳು || ೩೭ ||

ಎಱೆಯನೆಡರೊಳುೞೆ ಪಾಲ್ಗೊಂಡು ಮೇಲ್ಗೈದು ।
ಪೞೆನೇಸಱೆರ್ಬಲಿಗಳಂ ರಕ್ಕಸರ ಕುಲವ ।
ಮುಱೆವ ಸನ್ನಹಕೆ ಮೊದಲಾಗಿ ಪಾವನಮೆನಿಸಿ ಪೋದೆಡೆಯನೀರಿಳೆಯೊಳು ॥
ಬೆರೆದ ಪಡಿಯಿಲ್ಲದಂತಾದೊಡಂ ಕೇಳ್ವಿ ನೀ ।
ತಿರಿದ ವನದಿರವೆಂತು ಪುರದ ಸೊಬಗೆಂತು ರಘು ।
ವರನೆಲ್ಲ ಬಣ್ಣಿಸಿದ ಮಿಗದಿಕ್ಕೆಯೆಂತು ರಕ್ಕಸರೆಂತು ಪೇೞಿ ಸೀತೆ ॥ ೨೮ ॥

ಶಾಂತಿಧನ ಕೇಳ್ ಜನಕಜಾರಾಮರೆಸೆದರಾ ।
ಬಂತಿದೇರನ ಪಟ್ಟದರಸಿಯೆಡಬಲದೊಳ್ ಸ ।
ಮಂತದಿತಿದೇವಿಯಿರ್ಕೆಲದೊಳಂದೊರ್ಮೆ ಮೆಱೆದೊಪ್ಪಿದ ಶಚೀಂದ್ರರಂತೆ ॥
ಸಂತವಿಟ್ಟಾಗಳಾಣಿಗೆಗೊಂಡು ಮಾತೆಯಿಂ ।
ಕಾಂತೆಯೊಡನರಮನೆಗೆ ಪುಳಿನದೊಳ್ ನಲಿದಾಡಿ ।
ಸಂತಸದೊಳೆಣೆವೆರಸು ಸರಸಿಗೈತರ್ಪ ಂಚೆಯಂತೆ ರಾಮಂ ಬಂದನು ॥ ೨೯ ॥

ಮುನಿನಾಥ ಕೇಳ್ ಭರತಮುಖ್ಯರೊಡನಾಗಳರ ।
ಮನೆಗೆ ತೆರಳಲ್ ಮರ್ಕಟಪ್ರಮುಖರಂತು ರಾ ।
ಮನ ನೇಮದಿಂ ನವ್ಯಭವನಮಂ ಸೇರ್ದರೊಡನುಬ್ಬರದ ಸಂತಸದೊಳು ॥
ಅನಿತಱಿಂ ಮೇಲೆ ರಾಘವನ ಪಟ್ಟಾಭಿಷೇ ।
ಚನಕೆ ಸನ್ನಹಮಂ ಸುಮಂತ್ರ ಗುರು ಭರತರಂ ।
ದಿನ ದಿನದೊಳುೞಿದ ಕಡೆವಗಲೊಲಣಿಗೈಯುತಿರಲಿನನಬ್ಧಿಯಂ ಕಂಡನು ॥ ೩೦ ॥

ನಾಳೆಗೆನ್ನೀ ಬೞಿಯ ರಾಯಂಗೆ ಪಟ್ಟಮೆನು ।
ತಾಳೋಚಿಸಿರ್ಪರದಱಿಂ ಸಮಂ ರಥದೊಳಾ ।
ವೇಳೆಗೈತಂದು ಸೊಗಸುಂ ಕಾಣಲಕ್ಕುಮೆಂದರಿಗೇಲ್ಕಟಲ್ಚಿ ಪಿಂದೆ ॥
ಬೀೞಲೋರ್ಗಾಲಿಯಬ್ಧಿಯೊಳದಂ ಪುಡುಕಿ ತರ ।
ಲಾೞಿದನೊ ಕಾಣೆನೆಂಬೋಲ್ ಭಾಸ್ಕರಂ ಬೞಿಕ ।
ಗಾಳಿವಟ್ಟೆಯಿನಿೞಿದು ಕಡಲ ನೀರ್ವುಗೆ ತಾರೆಗಳ್ ತೋರ್ದುವಂಬರದೊಳು ॥ ೩೧ ॥

ಭೃಂಗಾಳಿ ಕಮಲಸಂಕುಲಮನಾಕಾಶಮಂ |
ತಂಗದಿರನವನೀರುಹಂಗಳಾಶ್ರಯಮುಮಂ ವಿ |
ಹಂಗಸಂದೋಹಮಬ್ಜಾಂಬಕೀಬೃಂದಮನನಂಗಂ ಪ್ರವೇಶಿಸಲ್ಕೆ ||
ಪಿಂಗಿ ಪಡುಗಡಲೊಳಡ್ಡಂ ಪೋದನತ್ತಲ್ ಪ |
ತಂಗನಾಗಳ್ ಸಂಜೆವೆಣ್ಣು ಮಿಂದುಟ್ಟ ಪೊಸ |
ರಂಗುಸೀರೆಯ ಸೆಱಗಿನಂತೆ ಸಂಧ್ಯಾರಾಗಮೆಸೆದುದಂತಾದೆಸೆಯೊಳು || ೩೨ ||

ಮೇಲಿನಿತಱೊಳ್ ದೇಶದೇಶದರಸರ್ಗೆ ಕ |
ಟ್ಟೋಲೆಯಂ ಬರೆವ ಮುನಿವರ್ಗಮಂ ಕರೆವ ದಿ |
ಕ್ಪಾಲರ್ಗೆ ಪೇೞ್ದಟ್ಟುವಿನಿತು ಕಜ್ಜದಿ ಭರತಸಚಿವಗುರುಗಳ್ ಸೇರ್ದರು ||
ಸಾಲಿನರಮನೆಗಳಂ ಸಿಂಗರಿಸ ಸುತ್ತಣ ವಿ |
ಸಾಲಬೀದಿಗಳೊಳುಱೆ ತೋರಣಂಗಳ ರಚಿಸಿ |
ಸಾಲದ ಸಮಸ್ತಸಂಭಾರಮಂ ಸವನಿಪುದಱೊಳ್ ಲಕ್ಷ್ಮಣಾದ್ಯರಿರಲು || ೩೩ ||

ಮೇಳವಿಸಿತುತ್ಸವಂ ರಾಜಮಂದಿರದೊಳಿ |
ನ್ನೇೞಿರೇೞಿರಿ ತಾಮಸಂಬೇಡವೊಡನೆಮ್ಮ |
ನಾಳುವನ ಪಟ್ಟಾಭಿಷೇಕಮಂ ಕಣ್ದಣಿಯೆ ಕಾಣಲಕ್ಕುಂ ಪೂರ್ವದಿ ||
ಕೇಳಿಬಲ್ಲಿರೆ ಬಿಡೌಜನ ಪಟ್ಟದಿರವಸದ |
ಕೇೞುಮುಡಿ ಮಿಗಿಲಪ್ಪುದುಂಟೆಂದು ಬಿಡದೆ ಲೋ |
ಕಾಳಿಯುಂ ಕತ್ತೆತ್ತಿ ಪೇೞಿ ಕರೆದುಪುದೆನಲ್ ಕೋೞಿ ಕುಕ್ಕೊ ಎಂದುದು
|| ೩೪ ||

ಜೋಡಿಸಿದ ಮಂಡಪಗಳೆಂತಿರ್ಪುವಲ್ಲಲ್ಲಿ |
ಕೂಡಿಸಿದ ಸಂಭಾರಮೆನಿತುಂಟು ಸೇವೆಯೊಳ್ |
ನಾಡ ಜನರಾರಿಲ್ಲ ಸಾಮಂತರೆಲ್ಲಿಹರ್ ದಿಗಧೀಶರೆಲ್ಲರೆಡೆಗೆ ||
ಓಡಿಹರೆ ಚಾರರೀವಿವರಮಂ ಪೋಗಿ ನೀಂ |
ನೋಡಿ ಬಾರೆಂದಿನಂ ಕಳುಹಲುದಯಾಚಲದ |
ಕೋಡುಗಲ್ಲಂ ಸಾರ್ದನೂರ ನೋಡುವೆನೆನಲ್ ಮುಂಬೆಳಗು ಬೆಳಗಿತಾಗ
|| ೩೫ ||

ಪಗೆಯುವಂ ದ್ರೋಹಚಿಂತಕನೆಂದೆಣಿಸದೆ ಮಱೆ |
ವುಗಲೆನ್ನ ನಿರದೆ ಕಾದವನೆಂದು ರಾಮನಂ |
ಪೊಗೞಿ ಕಾಕಾಯೆಂದು ಬೇಡಿಕೊಂಡಪುದೆನಲ್ ಕಾಗೆ ಕೂಗಿದುದಾಗಳೆ ||
ಖಗಕುಲದ ರಾಯಂಗೆ ಪಟ್ಟಮುದಱಿಂ ತಮ್ಮ |
ಬಗೆಯುವರಿಗೊರೆದು ಕರೆಯಲ್ಕೆಂದು ಸಂತಸದಿ |
ನೆಗೆದಪುವೊ ನಭಕೆನಲ್ ಮಿಕ್ಕುೞಿದ ಪಕ್ಕಿಗಳ್ ಪಾಱಿದುವು ದಿಕ್ಕುದೆಸೆಗೆ
|| ೩೬ ||

ಇನ್ನು ಪೊೞ್ತಾದುದೆಂದೆೞ್ಚೆಱೆಸಲಸವಸದಿ |
ಬಿನ್ನಣದ ರಥಕೊಂದೆ ಗಾಲಿಯಂ ಪೂಡಿ ಬದಿ |
ಬೆನ್ನಿಗೇೞ್ಕುದುರೆಯಂ ಕಟ್ಟಿ ಕೆಲಬಲದಿ ಪಾವಿಂ ಬಿಗಿದು ಸಾರಥಿಯನು ||
ತನ್ನ ಮುಂದಿರಿಸಿ ತಾನಡರಿ ಪೊಡೆ ಪೊಡೆಯೆಂದು |
ಸನ್ನೆಗೈದರ್ಯಮಂ ಪೂರ್ವಾದ್ರಿಯಂ ಪತ್ತಿ |
ಸನ್ನುತಮಹಾಭಿಷೇಕವನೀಕ್ಷಿಸಲ್ಕೆಂದು ಬರುತಿರ್ದನಾತುರದೊಳು || ೩೭ ||

ಮುನಿಪ ಕೇಳ್ ಬೞಿಕ ವೈಶಾಖಸಿತಸಪ್ತಮಿಯ |
ದಿನದುದಯಕಾಪುರದೊಳೆತ್ತಲುಂ ಬದ್ದಣದ |
ದನಿ ತಡೆಯದೈತರ್ಪುದೆಂದು ದಿಕ್ಪಾಲರಂ ಕರೆವಂತೆ ಪುದಿದುದೊಡನೆ ||
ಅನಿತಱೊಳ್ ಬೞಿವಿಡಿದು ನಡೆತರ್ಪ ನಾಲ್ದೆಸೆಯ |
ಜನಪಾಲಕರ ವಿಭವಕೆಂಬುದೇನೆಣಿಕೆಗೊಳ |
ಗೆನಿಸದಂದಣತುರಗಕರಿರಥೋಪ್ಪಂಗಳ್ಗೆ ಬೀದಿಗಳ್ ಕಿಱಿದಾದುವು || ೩೮ ||

ಬಂದ ರಾಯರನುಚಿತವಚನದಿಂ ನುಡಿಸಿ ಕರ |
ತಂದು ಬೀಡಾರಮಂ ತೋರ್ದು ಪಡಿಯಿತ್ತು ನಲ |
ವಿಂದೆ ಮನ್ನಿಸುತಿರ್ದರಲ್ಲಲ್ಲಿ ಗುರುವಸಿಷ್ಠನ ನೇಮದಿಂ ಸಚಿವರು ||
ಮುಂದೆ ಸುಮುಹೂರ್ತಮಂ ಕಾಯುತಿರ್ದರ್ ಶುಕ್ರ |
ಮಂದಗುರುಗಳ್ ಕಮಲಜನ ನೇಮದಿಂ ಸಭಾ |
ಮಂದಿರವನಮರವರ್ಧಕಿಗಳಿಂದ್ರನ ನೇಮದಿಂದ ಪವಣಿಸುತಿರ್ದರು || ೩೯ ||

ಬಿದುಗಲ್ಲ ನೆಲದ ಕಡವರದ ಗೋಡೆಯ ಮೇಲೆ |
ಪುದಿದ ಪಚ್ಚೆಯ ತೊಲೆಯ ರನ್ನಬೋದಿಗೆಯ ನಾ |
ಲ್ಬದಿಯ ನೀಲದ ಕಂಬದೆಡೆಯ ಮುತ್ತಿನ ಸೂಸಕದ ಪವಳವೊಗವಾಡದ ||
ಇದಿರೊಳೊಪ್ಪುವ ಕೆತ್ತಿಗೆಯ ಪಡಿಯ ಬಜ್ಜರದ |
ತುದಿಯ ಕೆಲಸದ ಸೊಗಸಿನೋಲಗದ ಸಾಲೆ ಬಂ |
ದೊದಗಿದರಸರ ಧಾತುಗೊಳಿಪುದಚ್ಚರಿಯೆ ಧಾತೂತ್ಕರಂ ತಾನಾಗಿರೆ || ೪೦ ||

ಸುರಪಂ ಧನಂಜಯಂ ಧರ್ಮರಾಜಂ ಸರಿ |
ದ್ವರನೀಶನಾಶುಗಂ ನರವಾಹನಂ ಧನೇ |
ಶ್ವರನಬ್ಜಸಂಭವಂ ಮುಂತಪ್ಪರಿರದೆ ನಿಜವಾಹನಂಗಳನಡರ್ದು ||
ಪರಿಚರರ್ಕೂಡೆ ಪೆಂಡಿರ್ವೆರಸು ನಡೆತಂದು |
ವರಸಭಾಭವನಮಂ ಸಿಂಗರಿಸಿದರ್ ತಮ್ಮ |
ಚಿರಪದವಿಗೆಡರಡರದಂತೆ ಕಾದವನ ಸಂತಸದ ಸುಗ್ಗಿಯ ಸಮಯಕೆ || ೪೧ ||

ನಾರದಂ ನಮುಚನರಿಮುಚನಗಸ್ತ್ಯಂ ಜರ |
ತ್ಕಾರು ಕಾತ್ಯಾಯನಂ ಕಾಶ್ಯಪಂ ಕಣ್ವನಹಿ |
ವೀರಂ ವಿಭಾಂಡಕಂ ವೀರ್ಯವಂತಂ ವಿಮುಖನತ್ರಿ ವಿಶ್ವಾಮಿತ್ರನು ||
ಭೂರಿಕೇಶಂ ಚ್ಯವನನಾತ್ರೇಯನುನ್ಮುಖಂ |
ಪಾರಿಭದ್ರಂ ಯವಕ್ರೀತನೇಕತನಿಂತು |
ಧಾರಿಣಿಯ ಸಕಲಮುನಿವರರಂದು ಬಂದು ಚಾವಡಿಯೊಳೊಪ್ಪಿರ್ದರಲ್ಲಿ || ೪೨ ||

ಅಂಗ ಬರ್ಬರ ಮಗಧ ಪಾಂಚಾಲ ಕೇರಳ ತೆ |
ಲುಂಗ ನೇಪಾಳ ಕರ್ಣಾಟ ಮಾಳವ ಕುಕುರ |
ವಂಗ ಘೂರ್ಜರ ಚೋಳ ಚೀನ ಕೊಲ್ಲಾಳ ಕೊಂಕಣ ಸಿಂಧು ಕೊರಹ ಭೇಟ ||
ಬಂಗಾಳ ಗೌಳ ಗಾಂಧಾರ ಕುಂತಳ ಹೈದ |
ಕೊಂಗ ಕಾಶ್ಮೀರ ಹಮ್ಮೀರಾರ್ಯಸಿಂಹಲ ಕ |
ಳಿಂಗ ಕಾಂಭೋಜ ಮುಂತಪ್ಪನಾಡೊಡೆಯರೋಲಗದ ಸಾಲೆಯೊಳೆಸೆದರು || ೪೩ ||

ಬಾಡಬರ ಗಡಣಂ ಪ್ರವಾಸಿಕರ ಕೂಟಮಾ |
ನಾಡಿಗರ ಗೊಂದಣಂ ಜೋಸೆಯರ ಸೆಱವಿ ಮೇಣ್ |
ಕೋಡಗರ ಬಳಗಮಲ್ಲಲ್ಲಿ ನೆಲೆಗೊಂಡಿರ್ದುವೀಮಹೋತ್ಸವವಿರದೆ ||
ನೋಡಿ ಪಾವನರಪ್ಪೆವೆನುತೆ ಮೂಲೋಕದಿಂ |
ನಾಡೆ ಸುರನರನಾಗದನುಜಗಂಧರ್ವಾದ್ಯ |
ರಾಡಲೇಂ ಸಕಲರ್ಬೈತಂದು ನೆರೆದಿರೆ ಕಣ್ಗೆ ಸೊಗಸಾದುದಾಶಾಲೆಯು || ೪೪ ||

ತುಂಬಿಹುದು ಚಾವಡಿಯೊಳಖಿಳಜನಜಾಲವಿ |
ನ್ನಿಂಬಿಲ್ಲ ಕೇಱಿಯೊಳ್ ನಡೆತರ್ಪ ಪಯಣಿಗ |
ರ್ಗೆಂಬ ಬಗೆಯಿಂ ಪೊಱಡಲನುಮಾನಮಾಗೆ ತಾವೆಲ್ಲರೊಡಗೂಡಿ ಬಱಿಕ ||
ಅಂಬರದೊಳೊಂದೆಡೆಯೊಳೊಗ್ಗಿ ನೋಡುವರೆನೆ |
ಲ್ಕೊಂಭತ್ತುಱೆಣಿಕೆಯಿಂ ಗ್ರಹರೇಕರಾಶಿಯೊಳ |
ಗಂಬುಜಾಸನನ ಕಟ್ಟಳೆಯೊಳೆಸೆದರ್ ಶುಭೋದಯರಾಗಿ ಶುಭಕಾರ್ಯಕೆ || ೪೫ ||

ಆ ಸಮಯದೊಳ್ ಸಕಲಮುನಿಗಳಭಿಮತದಿಂದಿ |
ದೇ ಸುಲಗ್ನಂ ಪುರೋತ್ಸವಕೆಂದು ಪೇೞೆ ಕಮ |
ಲಾಸನಂ ವರಪುರೋಹಿತನಾಜ್ಞೆಯಿಂ ಪೊಱಟು ಸಾಮಂತರಾಯರೆಲ್ಲ ||
ಸೌಸವದ ಪನಿನೀರ ಜಳಕಮಂ ಗೆಯ್ಸಿ ಪೊಸ |
ದೇಸೆಯಿಂ ಪಟ್ಟುಡೆಯನುಡಿಸಿ ಭಂಡಾರದಿಂ |
ಮಿಾಸಲೊಂದದ ರನ್ನದಾರಮಂ ತುಡಿಸಿ ರಘುರಾಮನಂ ಕರೆತಂದರು || ೪೬ ||

ವಸುಧೆಯಂ ಪೊರೆದು ದುಷ್ಟರನಿಕ್ಕಿ ಪೊತ್ತ ಬೆ |
ಳ್ಗಸದೆಸಕಮಲ್ಲದೆ ಕಿರೀಟದೀಧಿತಿಯಲ್ಲ |
ವೊಸೆದ ಜಯರಮೆಯ ಮೇಖಲೆಯ ಪೊಳಪಲ್ಲದಿದು ಕೇಯೂರಕಾಂತಿಯಲ್ಲ ||
ನಿಸದಂ ಪ್ರತಾಪದತಿಶಯಮಲ್ಲದಿದು ಮೇಲೆ |
ಮಿಸುಪ ಮಾಣಿಕದ ಪದಕದ ಶೋಭೆಯಲ್ಲಮೆನೆ |
ಪಸದನಂ ಪೊಸತೊಂದು ಮಾಱ್ಕೆಯಿಂದೆಸೆಯೆ ಪಟ್ಟಾಭಿರಾಮಂ ಬಂದನು || ೪೭ ||

ಆಲಿಸೆಲೆ ಮುನಿಪ ಮನ್ನಣೆಯ ಸಾವಂತರೊಡ |
ನೋಲಗಕೆ ನಡೆತರ್ಪ ರಾಮನಂ ಕಂಡು ದಿ |
ಕ್ಪಾಲಕರ್ ಮಣಿಯೆ ಮುನಿಗಳ್ ಪರಸೆ ಕೈಗಟ್ಟಿ ನಿಲೆ ಮಿಕ್ಕ ಸರ್ವಜನರು ||
ಮೂಲದರಸುಗಳ ಪರಿವಿಡಿಯೊಳೊಪ್ಪಿದ ಕಿರಣ |
ಮಾಲಿಯನ್ವಯದ ಸಿಂಹಾಸನದಿ ಸಕಲಸುರ |
ಜಾಲದನುಮತಿಯಿಂದೆ ಕೈವಿಡಿದು ಕುಳ್ಳಿರಿಸಿದಂ ಸುಮಂತ್ರಂ ಸಭೆಯೊಳು
|| ೪೮ ||

ಮಣಿದು ಗುರುಪದಕೆ ಪಿರಿಯರ್ಗೆಱಗಿ ಮನದಿ ದಿನ |
ಮಣಿಗೆ ಕೈಮುಗಿದು ಸಭೆಗಿಂಬಾಗಿ ಬಾಗಿ ಬೆಲೆ |
ವಣಿಯ ಗದ್ದುಗೆಯನೆಲ್ಲರ್ ಪೊಗೞೆ ಗುರುವಾಜ್ಞೆಯಿಂದೇಱೆ ಕಾಕುತ್ಸ್ಥನು
ರಣದ ವ್ಯೆಸಿರಿಯೆನಿಪ ಕೈದುವಂ ಭಾಸ್ಕರಕಿ |
ರಣದ ಪಡಿಯೆನೆ ಪೊಳೆವ ಮಗುಟವುಂ ಕುಲದನುಸ |
ರಣದ ಪದ್ಧತಿಯಂತೆ ರಾಜಮುದ್ರೆಯನೊಪ್ಪಿಸಿದರಾಗ ಮಂತ್ರಿವರರು || ೪೯ ||

ಪೊಂಗಳಸದೊಳ್ ತುಂಬಿ ಬೞಿಕ ವೇದೋಕ್ತದಿಂ |
ಗಂಗೆಯಂ ಗಂಧಕುಸುಮಾಕ್ಷತೆಗಳಿಂದೆ ಮುನಿ |
ಪುಂಗವ ವಸಿಷ್ಠನರ್ಚಿಸಿ ಸಕಲರಭಿಮತದೊಳಾಕ್ಷಣಂ ಶ್ರೀರಾಮಗೆ ||
ಮಂಗಳಾನಕದ ರವದೊಡನೆ ಸುರಗಾಯಕರ |
ಸಂಗೀತಮಧುರಸ್ವರಂ ಬೆರೆಯೆ ಸಾಮಗಾ |
ನಂಗಳೊಡನಾಶಿಷದ ನಿರ್ಘೋಷಮೆಸೆಯೆ ತಾನಭಿಷೇಕಮಂಗೆಯ್ದನು || ೫೦ ||

ನೂತನಾಲಂಕಾರದಿಂದೆಸೆಯೆ ಮತ್ತೆ ರಘು |
ಜಾತನಾಗದ್ದುಗೆಯೊಳಿತ್ತಲಬ್ಜಾಕ್ಷಿಯರ್ |
ಸೀತೆಯಂ ಕಮ್ಮೆಣ್ಣೆಯಂ ಪೂಸಿ ಮಿಸಿಸಿ ತುಱುಬಿಕ್ಕಿ ಕುಸುಮಗಳ ಮುಡಿಸಿ ||
ಪೀತಾಂಬರವನುಡಿಸಿ ಮಡಿವಚ್ಚವಂ ತುಡಿಸಿ |
ಶೀತಾಂಶುಮಂಡಲಕೆ ಕಱೆಯೆನಲ್ ಕತ್ತುರಿಯ |
ನೋತು ಫಣೆಯೊಳ್ ತಿಲಕವಿಟ್ಟು ಕೈಗೊಟ್ಟು ಕರೆತಂದರೋಲಗದ ಸಭೆಗೆ
|| ೫೧ ||

ಪತಿಯ ವೈಭವಮೆಂದು ನಗೆದೋಱಿ ನೆರೆದ ಭೂ ।
ಪತಿಗಳೆಮ್ಮವರೆಂದು ಕಣ್ಗೊಟ್ಟು ಪೂಜ್ಯರ್ಜ ।
ಗತಿಗೆ ನಿರ್ಜರರೆಂದು ಬಗೆಗೊಂಡು ನಿಗ್ರಹಾನುಗ್ರಹಸಮರ್ಥರೆಂದು ॥
ಯತಿಗಳಂ ಮೆಚ್ಚಿ ಘನಜಘನಭಾರಕೆ ಮಂದ ।
ಗತಿದೋಱೆ ಕಲಶಕುಚಭರಕೆ ನಡು ಬಳ್ಕೆ ರೇ ।
ವತಿಯರೊಡವರ್ಪ ರೋಹಿಣಿಯಂತೆ ಬಂದಳಾಳಿಯರೊಡನೆ ರಾಜಸಭೆಗೆ
॥ ೫೨ ॥

ಕುಂತಲಭ್ರಮರಮಡಿದಾವರೆಯ ಮಧುವಂ ನಿ ।
ತಾಂತಮಸಿದುಣ್ಬುದೆನೆ ಭೂಜಾತೆ ಬಂದು ನಿಜ ।
ಕಾಂತನಡಿಗೆಱಗೆ ಪಿಡಿದೆತ್ತಿ ವಾಮಾಂಕದೊಳ್ ಕುಳ್ಳಿರಿಸಿದಂ ರಾಮನು ॥
ಸಂತಸದ ಸುಗ್ಗಿಗೆ ಕುಕಿಲ್ವ ಕೋಗಿಲೆಯಂತೆ ।
ದಂತಿಗಮನೆಯರೊಲ್ದು ಪಾಡಿ ಪೊಂಪಟ್ಟಿಯೊಳ್ ।
ಕಾಂತರತ್ನಪ್ರದೀಪಂ ಬೆಳಗೆ ಬೆಳಗಿದರ್ ಮಂಗಳಾರತಿಯನಾಗ ॥ ೫೩ ॥

ನಾರದಂ ಪಾಡುತಿರೆ ತುಂಬುರಂ ಕಲಮಂದ್ರ ।
ತಾರವ್ಯವಸ್ಥೆಯಿಂ ವೀಣೆಯಂ ನುಡಿಸುತಿರೆ ।
ವಾರಿಜೋದ್ಭವನಲ್ಲಿ ಸೂಱೆಱೆತು ಪೊಗೞುತಿರೆ ವೇದಸೂಕ್ತಂಗಳಿಂದ ॥
ವಾರನಾರಿಯರೆಲ್ಲ ನೃತ್ಯವಾಡುತಿರೆ ಗಂ ।
ಭೀರಭೇರೀರವಂ ಪೊಣ್ಮುತಿರೆ ದೇವಮಂ ।
ದಾರಪುಷ್ಪಸ್ರಜದ ತೋರಮೞೆಗಱೆದುದೋಲಗದಿ ರಾಮನ ಶಿರದೊಳು ॥೫೪॥

ದಿಗ್ಗಜಂಗಳ್ ಮುಕ್ಕುಱಿಕ್ಕಿದುವು ಪೊಱೆಯೆ ಬ ।
ಲ್ಸುಗ್ಗಿನಿಂ ಕುಸಿದ ತಲೆಗಳನೆತ್ತಿ ಕಚ್ಛಪಂ ।
ಹಿಗ್ಗಿ ಕಾಲಾಡಿದಂ ಮೈಮುರಿದು ಸರಿದು ಪೆಡೆಯೆತ್ತಿದಂ ನಾಗೇಂದ್ರನು ॥
ಅಗ್ಗಿಮೊಗರೊಡಲ ಪಸಿವಡಗಿದುದು ಮೈವಣ್ಣ ।
ತಗ್ಗಿದೆಳೆವೆಣ್ಣ ಬಿಂಕಂ ಬಿಗುಪರ್ಾದುದೀ ।
ಸುಗ್ಗಿಯೊಳ್ ದಾನವಾಂತಕನ ಮೂರ್ಧಾಭಿಷೇಚನದೊಳಿಂದೀದಿನದೊಳು
॥ ೫೫ ॥

ಆದವೆಡಬಲದೊಳಿರ್ದು ಚಮರೀರುಹಂಗಳಂ |
ಸೋದರರ್ ಬೀಸೆ ಸರಿಲೆಕ್ಕಮಂ ಕರಣೀಕ |
ರೋದೆ ಜಸದೊಸಗೆಯಂ ವಂದಿಗಳ್ ಕೊಂಡಾಡೆ ಕುಲದೇಟ್ಗೆಯಂ ಮಗಧರು||
ಸಾದರಮಮಾತ್ಯರ್ ನಿಯುಕ್ತವಾರ್ತೆಗಳಂ ನಿ |
ವೇದಿಸೆ ಸಮಸ್ತಸಾಮಂತರೋಲೈಸೆ ಸಂ |
ಮೋದದಿಂ ಪಟ್ಟಾಭಿರಾಮನೊಡ್ಡೋಲಗಂಗೊಟ್ಟಿರ್ದನಾಸಭೆಯೊಳು || ೫೬ ||

ಭೂರಿದಕ್ಷಿಣೆಯನವನೀಸುರರ್ಗೀವಂ ಕು |
ಬೇರನಬ್ಜೋದ್ಭವಂ ಮುನಿಗಳ್ಗೆ ತಾನೆ ಸ |
ತ್ಕಾರಮಂ ಮಾಳ್ಪನಮರೇಂದ್ರನಭ್ಯಾಗತರ್ಗೆಡೆಗೆಯ್ವನೋಲಗದೊಳು ||
ಮಾರುತಂ ಬೀಸುವಂ ಧರ್ಮರಾಜಂ ಕುಸುಮ |
ಹಾರಾನುಲೇಪನಂಗಳಿನರ್ಚಿಸುವನೀಶ |
ನಾರೈವನಗ್ನಿ ವೀಳೆಯವಿಡುವನರ್ಘ್ಯಪಾದ್ಯವನೀವನಾವರುಣನು || ೫೭ ||

ಯವನ ಕುಳ್ಳಿರ್ ಚೈದ್ಯ ಬಂದೆಱಗು ಮುಂತೆ ಸೈಂ |
ಧವ ನುರ್ಗದಿರ್ ಪೊಱಡು ಸೌರಾಷ್ಟ್ರ ಕಾಣಿಕೆಯ |
ನವನೀಶಗಿಡು ನಿಷದ ಹೂಣನಾರ್ ಸೌವೀರನೆಲ್ಲಿ ಕರೆ ಹೈಹಯನನು ||
ಪವಣಱಿತು ನಡೆ ಲಾಳ ಕೈಗಟ್ಟು ಚೋಳ ಪಿಂ |
ತನವನೊಡನೆ ಪೋಗು ಕರ್ಣಾಟ ನೀನೆಂದಲ್ಲಿ |
ಪವನಜಂ ಮುಂತಪ್ಪ ಮರ್ಕಟಪ್ರವರರೋಲೈಸುತಿರ್ದರ್ಸಭೆಯೊಳು || ೫೮ ||

ಇದು ಸುರಪನಿತ್ತ ಪೊಸಬಾಸಿಗಂ ಕೈಕೊಳ್ಳು |
ದಿದು ಶೇಷನಿತ್ತ ಮಾಣಿಕದ ಕುಂಡಲವಿತ್ತ |
ಲಿದು ವರುಣನಿತ್ತ ಮುತ್ತಿನ ಹಾರಮಿದು ಹುತಾಶನನಿತ್ತ ರತ್ನಂಗಳು ||
ಇದು ಕುಬೇರಂ ತಂದ ಪೊನ್ನ ಭಂಡಾರಮಿಂ |
ತಿದು ಸಮೀರಂ ತಂದ ಕಸ್ತೂರಿಯ ಭಾರಮಿ |
ನ್ನಿದು ಗಿರೀಶಂ ತಂದ ದಿವ್ಯಗೈರಿಕಮೆಂದು ಕಾಣಿಕೆಯನೊಪ್ಪಿಸಿದರು || ೫೯ ||

ಘೋರವೆ ಭುಜಾಗ್ರದೊಳ್ ಭೂಮಧ್ಯದೊಳ್ ಜಯ |
ಶ್ರೀರವೆ ನಿಜಾಂಕಬಂಧುರಪೀಠತಟದೊಳ್ ಮ |
ನೋರವೆ ವಿಲಾಸದಿಂ ಮೆಱೆದಿರಲ್ ದಿಕ್ಕಾಂತೆಯರ್ಗೆ ದಿಗ್ಗಜನಿಕರಕೆ ||
ಸಾರಘನಸಾರದಣ್ಪಿಂ ಕೀರ್ತಿಮುಖಮುಂ ಯ |
ಶೋರಶ್ಮಿಯಿಂ ಪುದುಂಗೊಳಿಸಿ ಮಱೆವೊಕ್ಕ ಸುರ |
ವಾರಮುಂ ಕಾದೊಂದು ತೇಜದಿಂ ರಾಘವಂ ಸಿಂಹಾಸನದೊಳೆಸೆದನು || ೬೦ ||

ಪರಮರಣಕಾಂಕ್ಷಿಯಾಗಿರ್ದುಂ ಬೃಹತ್ಕೃಪಾ |
ಶರಧಿ ಭವದೂರನಾಗಿರ್ದುಂ ಭವಪ್ರಿಯುಂ |
ನೆಱೆ ನೃಶಂಸನಪಾತ್ರನಾಗಿಯುಂ ಸುಜನವತ್ಸಲನುಂ ಜಗತ್ಪೂಜ್ಯನು ||
ಅರಸಂ ಸದಾವಿನುತನಾಕಲಂಕಾಪ್ರಥಿತ |
ನಱಿಯಲ್ಕುರೂಪಾತ್ತವಿಗ್ರಹನುಮಾಗಿರ್ದು |
ಸರಸೋದಯಂ ನಿಷ್ಕಲಂಕನಾಗೆಸೆದಂ ತ್ರಿಲೋಕಾಭಿರಾಮನೆನಿಸಿ || ೬೧ ||

ಸಲೆ ನೋಡಲ್ಕೈದೆ ತಲೆಯೊಳ್ ನವಿರ್ಗಳಾಗಸಂ |
ಚಲಿತಮಧುಪದ್ಯುತಿಯನಾಳ್ದಮರೆ ಕಂಬುಗಳ |
ಹೊಳರಮೆಯ್ಯಿಂಗಳನಯನಮೆಸೆವ ಫಾಲ ಧೃತಪುನ್ನಾಗಶೋಭೆ ನಿಮಿರೆ ||
ಕೆಲದೊಳಚಲಾತ್ಮಭವೆಯಿರೆ ರಾಜಮೌಳಿಯೋಂ |
ತೊಳಗಿದನೊ ಶಿವನೊಳಂ ತನ್ನೊಳಂ ಭೇದಮೇಂ |
ತಿಲಮಾತ್ರಮಿಲ್ಲೆಂಬ ಬಿರುದನುಮೊಱಲ್ದು ಸಾರ್ಥಕಮುಂ ನೆಗಬ್ಬುವಂತೆ || ೬೨ ||

ಪಾಡಿದರ್ ಕಿನ್ನರರ್ ನಲಿದರ್ ಭವಾದಿಗಳ್ |
ನೋಡಿದರ್ ಕಣ್ಗಳ ಮಲಂ ಮಾಂಜಲೊಡನೆ ಕೊಂ |
ಡಾಡಿದರ್ ದಿಗ್ವಿಜವರರ್ ದಿಗಧಿಪರ್ದನುಜರ್ನಿಜಾಂಗಮುಂ ದಂಡದಂತೆ ||
ನೀಡಿದರ್ ಕಾಣ್ಕೆಯಂ ನಮಿಸಿ ಸಂತಸದೊಳು |
ರ್ಕಾಡಿದರ್ ನೆರೆಪೊರೆಯ ಜನಪದದ ಮನ್ನೆಯರ್ |
ಕೂಡೆ ಕುಣಿಕುಣಿದು ದಣಿದಣಿದು ಮಣಿಮಣಿದು ತಣಿತಣಿದರ್ ಸಮಸ್ತ ಜನರು
|| ೬೩ ||

ಒಂದನೆಡೆಗೆಯ್ದಿರಡು ಭಾವಮಂ ತೊಱೆದು ಮೂ |
ಱಂದದಿಂ ಪದೆದು ನಾಲ್ಕಱೊಳ್ಳೈದನಳವಡಿಸಿ |
ಸಂದಾಱನೊದೆದು ಸದೆದೇೞನೆಂಟುಮನಿಕ್ಕಿ ಹೃದಯಮುಮರ್ಾಂಬರದೊಳು ||
ನಿಂದಿರಿಸಿ ಬಿಂದುರೂಪಮನೊಱಲ್ದೊಂಭತ್ತ |
ಱಿಂದೆಱಗಿ ನುತಿಸಿದರನಂತಚಿತ್ಪ್ರಭನನಿಂ |
ತೆಂದಮುಂದಾನಂದದಿಂದೊಂದಿದಮಲಗುಣಸಾಂದ್ರರ್ ಮುನೀಂದ್ರರಂದು
|| ೬೪ ||

ಗುರು ನಿರಂಜನ ನಿತ್ಯ ಶುದ್ಧ ಪರಿಪೂರ್ಣ ಪರ |
ತರ ಪರಮಹಂಸ ದುರಿತಧ್ವಂಸ ವಿಶ್ವವಿ |
ಸ್ತರಣಾದಿಹೇತು ಕೈವಲ್ಯಲಕ್ಷ್ಮೀರಮಣ ವೈಕುಂಠ ನಾರಾಯಣ ||
ನಿರುಪಮ ಚಿದಾನಂದ ಗೋವಿಂದ ಸತ್ಯಮುಂ |
ದಿರ ಸತ್ಸ್ವರೂಪ ತತ್ತ್ವಾತೀತ ಧಾತ ನಿ |
ರ್ಮರಣ ಶರಣಾಗತಜನೈಕಸುರಧೇನು ಶರಣಾಗ ತನುಭೂರಿಲೀಲ || ೬೫ ||

ಶರಣಾಗನಾದ್ಯನಿಶ್ಚಿಂತ್ಯ ಚಿದ್ಘನ ಚರಾ |
ಚರದ ಚೈತನ್ಯಾತ್ಮ ಪರಮಾತ್ಮವೋಂ ಪರಾ |
ತ್ಪರ ಪರಬ್ರಹ್ಮ ನಿರ್ಗುಣ ನಿಸ್ತುಲಾಂಗ ಸತ್ತಾಮಾತ್ರ ಸಚ್ಚಿತ್ಪ್ರಭಾ ||
ಸ್ಥಿರತತ್ವ ವಿಚ್ಚಿದಂಬರರಂಗನಟ ಜಗ |
ದ್ಭರ ನಿಗಮಯೋನಿ ನಿರವದ್ಯ ನಾಸ್ತಿಕಭಯಂ |
ಕರ ಭೀಮ ಕಾಮದ ಮಹಾಮಹಿಮ ಮಾಯಾರಮಾರಾಮ ರಾಮನಾಮ
|| ೬೬ ||

ಜಲರುಹಭವಾಂಡಸರ್ವಸ್ವಮಂ ಪೇರೊಡಲೊ |
ಳೊಳಕೊಂಡು ವಿಶ್ವತೋಮೂರ್ತಿಯೆಂದೆನಿಸಿ ನಿ |
ಶ್ಚಲತತ್ತ್ವನಾಗಿ ಶ್ರುತಿತತಿಗೆ ನಿಲುಕದ ವಿರಾಡ್ರೂಪದೋಲಗದ ಮನೆಯ ||
ನೆಲೆಯೊಳೊಪ್ಪಂಬಡೆದ ಸಿಂಹವಿಷ್ಟರದ ಕೆೞ |
ದಳತೆಗೊಳವಟ್ಟು ಮುಂಡಿಸಿದ್ದೈ ತ್ರಿಲೋಕಮುೞ ||
ಯಲಣೋರಣೀಯನುಂ ಮಹತೋಮಹೀಯನುಂ ನೀನೆಂಬುದಗ್ರತೆಯನು
|| ೬೭ ||

ಸ್ಥಿರಪದ್ಮಪೀಠಂ ಋಜೂನ್ಮುಖವಪುಸ್ಸ್ಪೃತಾ |
ಕ್ಷರತತ್ತ್ವನರ್ಥಿತಮರುದ್ಗತಿ ವಿವರ್ಧಿತಜ |
ಠರಪಾವಕಂ ತತಸುಷುಮ್ನಾಂತರಾಲತೇಜೋಮಂಡಲೋಲ್ಲಸಿತನು ||
ಪರಿಚಿಂತಾಂತಜ್ಯೋತಿ ರಮ್ಯನೆನಿಸಿದ ತಪೋ |
ವರನಾದೊಡೇಂ ತನ್ಮನೋಗತಿಗೆ ವೈಗುಡದೆ |
ಮೆಱೆದಪೈ ಪೊಗೞ್ವನಂ ನಿಗಮಾಳಿಯೊಲ್ದತ್ಯತಿಷ್ಠದ್ದಶಾಂಗುಲಮೆನೆ ||೬೮||

ರಾಗಭೋಗಂಗಳಂ ಕೆಡೆಯೊದೆದು ನಿಖಿಲನಿಗ |
ಮಾಗಮದೊಳಾಡಿ ದೈಹಿಕಗುಣವಿತಾನಮಂ |
ನೀಗಿ ಕಳೆದಾತ್ಮಸಂಸ್ಕರಣದಿಂ ಚಿತ್ಪದಸಮಾಕಲಿತಚಿತ್ತರೆನಿಸಿ ||
ಯೋಗವಿಧಿಯಿಂ ನಡೆದು ಹೃದಯಾರವಿಂದಮಂ |
ಬೀಗಿಸಿದೆವೆಂದತಿವಿಜೃಂಭಿಸಿದೊಡಧ್ಯಾತ್ಮ |
ಯೋಗಿಗಳದೇಂ ಭವತ್ಪದಪದ್ಮಮಂ ತಿಳಿಯಲಾರ್ತರೇ ದೇವದೇವ || ೬೯ ||

ವಿಷಯದುರ್ವಿಷಯಂಗಳೊಳ್ ಬೆರೆಯದೇಕಾಗ್ರ |
ದೆಸಕಮಂ ತಳೆದು ರಿಪುವರ್ಗರಿಪುವರ್ಗಮಂ |
ದೆಸೆಗೆಡಿಸಿ ಸಂಗತಸುಹೃತ್ಸುಹೃದರಿಂ ಪರಮಜೀವಸಮಭಾವದಿಂದ ||
ಪೊಸರಾಜಯೋಗಘನಯೋಗರಾಜ್ಯಮನೆ ಸಾ |
ಧಿಸವೇೞ್ಪುದಖಿಲಸಾಧುಗಳೆಂದು ತಾಯ್ಗೆ ಬೋ |
ಧಿಸುವ ನೆವದಿಂದಱಿಪಿದೈ ಸಾಂಖ್ಯತತ್ತ್ವಮಂ ಮಹಿಯೊಳ್ ಮುನೀಂದ್ರನಾಗಿ || ೭೦ ||

ತುಂಬಿ ತೂಳ್ದೊಳರೆ ಘನಪುಷ್ಕಲಾವರ್ತಕಮು |
ಟುಂಬಮುಂಭಃಪ್ರಣಿಧಿನಿಚಯಸಂಗಮಕೋಟಿ |
ದಂಭೋಳಿಘೋಷಭೀಷಣರವಂ ಕೂಡೆ ಸಂವರ್ತಝುಂಝಾವಾತದ ||
ಗಂಭೀರಪಾದಕೆತ್ತೆತ್ತದೆಸೆ ಕಮಠದಿ |
ಕ್ಕುಂಭಿಕುಂಭೀರವರ್ ಪೇೞೆನೆ ಮಿೞ್ದರ್ದ ಕ |
ಲ್ಪಾಂಭೋಧಿಜಳದೊಳ್ ಝಷಾಕೃತಿಯೊಳೆತ್ತಿದೈ ವೇದಮಂ ವೇದವೇದ್ಯ || ೭೧ ||

ವಿಲಯಜಲನಿಧಿಯೊಳೆಲೆವಾಸಿನೊಳ್ ನಲಿವ ನಿ ।
ಶ್ಚಲಗೆ ನೀರಾವಾಸಮಿದು ಪೊಸತೆ ಮೇಣಬ್ಧಿ ।
ನಿಲಯನಲ್ಲಾ ಬಣಗುವೆಟ್ಟುಮಂ ತಳೆವುದೇನರಿದೆ ವಿಶ್ವಂಭರಂಗೆ ॥
ಗೞಿಗೆಗೊಂದೊಂದು ರೂಪಿನೊಳಾಡಿ ತೋರ್ಪರ್ಗೀ ।
ಜಲಜಂತುಲೀಲೆ ಸೋಜಿಗಮೆ ಪೇೞೆಂಬಿನಂ ।
ಜಲಧಿಮಥನದೊಳಂದು ಬೆನ್ನೊಳಾಂತ್ತೈ ಗಿರಿಗರಿಷ್ಠಮಂ ಕಮಠನಾಗಿ ॥ ೭೨ ॥

ಸುರರೊಳ್ ಪೊಣರ್ದು ಸದೆದಾಶಾಧಿನಾಯಕರ ।
ಪುರದೊಳಲ್ಲಲ್ಲಿ ತಿರಿದವರನೆಣ್ಮ್ರಾಲೆಗಳೊ ।
ಳಱುಬಿನೊಳ್ ತೂಱಿ ಜಗದೇಕಭೀಕರನೆನಿಸಿ ಕಟ್ಟುಗ್ರದರ್ಪದಿಂದ ॥
ಧರಣಿಯುಂ ಸುತ್ತಿ ಕಕ್ಷದೊಳೌಂಕಿ ಬಿಡದೆ ಮುಂ ।
ಬರಿದು ಪಾತಾಳಮಂ ಪುಗುವ ಹೇಮಾಕ್ಷನಂ ।
ತರಿದಿಕ್ಕಿ ದಯದಿನುದ್ಧರಿಸಿದ್ದೈ ಧರೆಯನಾದಿವರಾಹರೂಪದಿಂದ ॥ ೭೩ ॥

ಛಿಳಿಛಿಟಸ್ವನಕೆ ದಿಕ್ತಟಮೊಡೆಯೆ ಕಮಲಭವ ।
ನಿಳಯಂ ಪೆಳರ್ದದಿರೆ ರಸೆಯುಂ ರಸಾತಳಮು ।
ಮಳವೞಿಯೆ ದನುಜರೆರ್ದೆ ಬಿಱಿಯೆ ಸುರರಳ್ಕೆ ಪೂಣ್ದಮಹಾಡಂಬರದೊಳು॥
ವಿಲಯಾಂತಭೈರವನ ಭೈರವಮನಾಂತು ವೆ ।
ಗ್ಗಳಿಸಿ ಬಜ್ಜರದ ಮಾಕಂಭಮಂ ಸೀೞ್ದೊಗೆದು ।
ಸಲಹಿದ್ದೈ ಪ್ರಹ್ಲಾದನಂ ಸುಜನಜನಶಿರೋಮಣಿಯಂ ನಖೋಗ್ರಪಾಣೀ ॥೭೪॥

ಉಟ್ಟ ಪೀತಾಂಬರದ ನಿಱಿಯ ನುಣ್ಪಿಡಿದ ಪಣೆ ।
ಗಿಟ್ಟ ಪುಂಡ್ರತ್ರಯದ ತುಳಸಿಮಾಲಿಕೆಯೊಡನೆ ।
ತೊಟ್ಟ ನೀವೀತಾಗ್ರದೆಸೆವ ಕೃಷ್ಣಾಜಿನದ ಮೇಲ್ವಾಯ್ದ ಚೆಲ್ವಿನಿಂದ ॥
ಪುಟ್ಟವಾಮನನಾಗಿ ಬೇಡಿ ಭೂಮಿಯನೆರಡು ।
ದಟ್ಟಡಿಯೊಳೊಳಕೊಂಡು ಬಲಿಯಂ ರಸಾತಳಕೆ ।
ಮೆಟ್ಟ ಪಾಲಿಸಿದ್ದೈ ಸುರರ್ಕಳಂ ದನುಜಭೀತರ್ಕಳುಮನಲ್ಕಱಿಂದ ॥ ೭೫ ॥

ಭುವನೈಕವಿಕ್ರಮಂ ಬಹುಶತಬಾಹುರಾ |
ಜಿವಿಚಿತ್ರನಪ್ರತಿಮಸುಪ್ರತಾಪಂ ಮಹಾ |
ಹವಧುರಂಧರನುಮಾಗುರ್ಬಿ ದಿಗ್ದೇಶಮಂ ಗೆಲ್ದೊಂದೆ ಬೆಳ್ಗೊಡೆಯೊಳು ||
ಭುವನಮಂ ತಾಳ್ದಂತುಗುರ್ವಿಸಿದ ಕೃತವೀರ್ಯ |
ಭವನಂ ತದನ್ವಯೋದ್ಭವರನೆಲ್ಲಾ ರಾಜ |
ನಿವಹಮಂ ಕೂಡೆ ತಡೆಗಡಿದೊಡನೆ ಪೊಡವಿಯಂ ಪೊರೆದೈ ಕುಠಾರಧಾರೀ
|| ೭೬ ||

ಪದಘಾತಕವನಿಯುತ್ಕಂಪಿಸೆ ಕೆದರ್ದ ಜಟೆ |
ಯುದಿತರವಿಶಶಿಗಳಂ ಮುಸುಕೆ ಬಿಡುಗಣ್ಗಳಿಂ |
ದುದಿರ್ವ ಕೆಂಗಿಡಿ ಘೋರವಾಗೆ ಜೋಲ್ಮುಡಿಯ ಗಂಗಾಂಬುಧಾರಾಸಾರದ ||
ಹದನುಗ್ರವಿಲಯದುತ್ಪಾತಮನೊಡರ್ಚಲ |
ಗ್ಗದ ವೃಕನಳುರ್ಕೆಗೋಡುವ ಮೃಡನನೋವಿದೈ |
ಸದೆದೈ ತದುಗ್ರಖಲನಂ ಪಾರ್ವನಾಗಿ ನೀಂ ಕಪಟಪ್ರಬಂಧದಿಂದ || ೭೭ ||

ಅಜನಾಗಿ ಬಹುಲಕ್ಷಮಿತಜೀವಯೋನಿಜ |
ವ್ರಜಮಂ ವಿಶುದ್ಧಮಾಯಾಬೀಜದೋಜೆಯಿಂ |
ಸೃಜಿಸಿ ಬಿತ್ತರಿಸಿ ಬಂಧಿಸಿ ಕರ್ಮಪಾಶದಿಂ ಪೊರೆದು ಹರಿರೂಪಿನಿಂದ ||
ನಿಜಲೀಲೆಯೊಳ್ ಚತುರ್ಮುಖದೀರ್ಘದೇಹದಶ |
ಭುಜಲಸಿತಕಾಲಾಗ್ನಿರುದ್ರಾವತಾರದಿಂ |
ತ್ರಿಜಗಮಂ ದಹಿಪ ಚಿತ್ರಚರಿತ್ರನೀಶ್ವರಂ ನೀನಲ್ತೆ ದಾನವಾರೀ || ೭೮ ||

ಆವನಕಲಂಕತೇಜೋರಾಜಿಯಿಂ ಪೊದ |
ಱ್ದಾವಿಧುವಿಭಾಕರರ್ ಬೆಳಗುವರ್ ತ್ರಿಜಗಮಾ |
ಯ್ತಾವನಿಂದಾವನಾಜ್ಞೆಗೆ ಸಂದು ವರ್ತಿಪಳ್ ಮಾಯೆ ನಿಚ್ಚಂ ಪೆಳರ್ದು ||
ಆವನಮಲಪ್ರಭಾವದೊಳಬ್ಧಿ ನಿಲ್ಗುಮಾ |
ಸ್ಥಾವರಚರಂಗಳಳ್ಕಾಡುಗುಂ ಬಾಳ್ಗುಮಾ |
ದೇವಂ ಬೃಹತ್ಪ್ರಭಂ ಭುವನೈಕವಲ್ಲಭಂ ನೀನಲ್ತೆ ರಾವಣಾರೀ || ೭೯ ||

ಕ್ಷೀರಸಾಗರನಿಲಯನುತ್ತರಿಸಲೀಬಣಗು |
ನೀರಸಾಗರಕೇಕೆ ಸೇತು ಮಿಗೆ ಜಗದ ಸಂ |
ಸಾರಸಾಗರಮನರೆಯಟ್ಟುವ ಮಹಾತ್ಮ್ಯಂ ನೆರಂಬಾರಲೇಕೆ ಖಳರ ||
ವಾರಸಾಗರದೊಡನಿದಿರ್ಚಿ ಜೀವಂಗೊಳಲ |
ಪಾರಸಾಗರಮಲ್ತೆ ನಿನ್ನುರುಮಹಿಮೆ ದಯಾ |
ಸಾರಸಾಗರಸಗರಕುಲಸಾಗರೇಂದುಶರಣೆಂದಿರಾವರವಲ್ಲಭಾ || ೮೦ ||

ಜಯ ಜಯತುಲಾನುಜಾತಾನಂದಮೂರ್ತಿ ಜಯ |
ಜಯ ಪಾರಿಜಾತನಂದನರುಚಿರವಂದ್ಯ ಜಯ |
ಜಯ ಮಹಾಘಾಗೌಘಭೇದನಾಶ ನಿರಾಮಯ ಮಹಾದಿದೇವಾಂಚಿತ ||
ಜಯ ಜಯತುಲಾನುಜಾತಾನಂದಮೂರ್ತಿ ಜಯ |
ಜಯ ಪಾರಿಜಾತನಂದನರುಚಿರವಂದ್ಯ ಜಯ |
ಜಯತು ಜಯಮೆಂದಿಂತು ಪೊಗೞುತೆ ಯತೀಂದ್ರರ್ ಪುನಃಪ್ರಣಾಮಂ
ಗೆಯ್ದರು || ೮೧ ||

ಕೆಡೆದುದನ್ನೆಗಮುಸುರದಾರುಣನ ರಾವಣನ |
ಕಡುಬಾಧೆಗಸುವನೆಡೆಗೊಟ್ಟು ಕೆಟ್ಟೆಮ್ಮಳಕೆ |
ಕಡಲಾಗಿ ಬಾಡಿ ಬಸವೞಿದುೞಿದಳರ್ದೊಳರ್ದೆರ್ದೆ ಗುಂದಿ ನೊಂದು ಬೆಂದು ||
ಬಡವಾಗಿ ಬಾಗಿ ಬಾಗುೞೊಳೞ್ದು ಬತ್ತಿದವ |
ರೊಡಲ ಭಾರಮನಾನಲಾರದಿರೆವೆನೆ ಪೊದ |
ೞ್ದಡಿಯೊಳಮರವ್ರಜಂ ಕಾದೈ ಕೃಪಾಬ್ಧಿ ರಾಮಾ ಇಂದಿಗೆಮ್ಮನೆನುತ || ೮೨ ||

ನೊಂದೆವಳುಕಿದೆವಗಿದೆವೞಿದೆವುೞಿದೆವು ಬೆದೆಯೊ |
ಳೊಂದಿದೆವು ಕಂದಿದೆವು ಕುಂದಿದೆವು ಬಗೆಗೆಟ್ಟು |
ಬೆಂದೆವು ಬಿಗುರ್ತೆವಡಿಗಡಿಗೆ ಬಾಯ್ವೊಯ್ದು ಬಿಸುಸುಯ್ದು ಬೈದೆವು ಬಿದಿಯನು ||
ಬಂದಣಿದೆ ಬಾೞ್ದೆವಿನ್ನೆಗಮುಕಟ ದಾನವಮ |
ದಾಂಧನುಪಹತಿ ಸಾಕು ಕಾದೈಯೆಮ್ಮ |
ತಂದೆ ದಯೆಗೆಯ್ದುೞುಹಿದೈ ನಿಜಾಶ್ರಿತರನಿಂದಿಗೆ ಕೃತಾರ್ಥರೆವೆಂದರು || ೮೩ ||

ಧರೆಯೊಳ್ ಧರಾಮರಜನಂ ನೆಗಟ್ಟಿ ಜನ್ನದೋ ।
ಗರವೊಗರುಗೊಂಡುದಾವಗಮಾಳ್ದ ಚಿಂತೆಗೊಡ ।
ಲುರಿದು ಕೃಶವಾಗಿ ಸೊಬಗಟಿದೆವ್ಮ ನಿರ್ಜರತೆ ನಾಣ್ಣುಡಿಗೆ ಪಕ್ಕಾದುದು ॥
ಸೆಱೆಯೊಳುಡುಗಿರ್ದ ರವಿಶಶಿಗಳಂ ಕುಱುಪಿಡುವೊ ।
ಡೞಿಯದಾದೆವು ದೇವ ಖಳನವನುಪದ್ರವಂ ।
ಪರಿಹಾರವಾದುದಿನ್ನೀ ಬನ್ನವೊಳವೆಯದಱಿಂ ಕೃತಜ್ಞರೆವೆಂದರು ॥ ೮೪ ॥

ಸುರಮುನಿಗಳೋದುವ ಪುರಾಣಘೋಷಶ್ರವಣ ।
ದಿರವೆತ್ತ ರಕ್ಕಸರ ಕರ್ಕಶರವದ ಭಯಂ ।
ಕರಕೆ ಪಡಲಿಟ್ಟ ದುಸ್ಸ್ಥಿತಿಯೆತ್ತಲಮರ್ದುಮನವರ್ದಿರ್ಪಂಟೆ ನಲ್ಮೆಯಿಂದ ॥
ಸುರಭಿಯತ್ತಣಿನಿಷ್ಟಭೋಜನವನುಂಡ ವ್ಮೈ ।
ಸಿರಿಯೆತ್ತ ಖಳನ ಸೆಱೆವನೆಯ ತಣ್ಗೂಟಿತ್ತ ।
ಮಱೆಯಲವ್ಮೆವು ಜೀಯ ಸಾಕದೀಬನ್ನವಿನ್ನೊಳವೆ ಧನ್ಯರೆವೆಂದರು ॥೮೫॥

ಪೆಂಡಿರನುಟಿದು ಗುರುಹಿರಿಯಬಂಧುಬಾಂಧವರ ।
ತಂಡಮನಗಲ್ದಿಣೆಯರಂ ತೊಱೆದು ದೆಸೆದೆಸೆಯ ।
ನಂಡಲೆದಳವುಗುಂದಿ ಪಸಿವಿಂ ಪಿಪಾಸೆಯಿಂ ಸ್ಥಾನವಿಭ್ರಷ್ಟರೆನಿಸಿ ॥
ಕಂಡಕಂಡವರ ಕೆಳೆಗೆಳಸಿ ಬಯಲಿಗೆ ದಿಗಿಲು ।
ಗೊಂಡು ಗೋಟಾಡಿದೆವಿವ್ಮಾಬನ್ನದಿರವ ನೀ ।
ನುಂಡುಂಡು ಕಂಡು ರಕ್ಷಿಸಿದ್ವೈ ಕೃಪಾಳುಗಳ ದೇವ ಶರಣಾಗೆಂದರು ॥ ೮೬ ॥

ದುರುಳನಟಿದಂ ಸೆಱೆಗೆ ಸಿಲ್ಕಿ ಪುದುಗಿರ್ದೆನ್ನ ।
ಪರಿವಾರಕಾಯ್ತು ಬಿಡುಗಡೆ ದೇವಸಂಪದಂ ।
ಸುರಸುರಭಿಕಲ್ಪಲತೆಗಿತೆಗಳೊಡನೆನಗೆ ಕೈಸೇರ್ದುದು ಧರಾತಳದೊಳು ॥
ಧರಣಿಯಮರರ ಯಜ್ಞದಾರಂಭಸಂಭ್ರಮಂ ।
ಪರಿಲಸಿತವಾಯ್ತು ಮನಸಾಭೀಷ್ಟಮೀಯೆಡೆಗೆ ।
ನೆರವೇರಿತಿನ್ನು ಕೃತಕೃತ್ಯನಹನೆಂದು ವಾಸವನೆಱಗಿದಂ ಪದದೊಳು ॥ ೮೭ ॥

ನಿತ್ಯಪಂಚಾಂಗಪಠನಮನಲಸದೆಸಗಿ ನೈ |
ಮಿತ್ತಿಕಶುಭಾಶುಭಂಗಳೊಳೊದಗಿ ಜೋಯಿಸಿಗ |
ವೃತ್ತಿಯಿಂ ದಿನವ ನೂಂಕಿದೆನಾದೊಡೆಂದಾನುಮೊಂದೆಡೆಗನಿಷ್ಟಮುದಿಸೆ ||
ಮುತ್ತಯಂ ದುರ್ಮುಹೂರ್ತವನೊರೆದನೆಂದವನ |
ಪತ್ತುಬಾಯಂ ತೆಱೆದು ಕೂಗಿ ಪಲ್ಮಸೆದವಂ |
ಸತ್ತಱಿದು ಮಣ್ಗೆ ಕೂಡಿದನಕಟ ಬರ್ದುಕಿದೆ ಗಡೆಂದಡಿಗಜಂ ಮಣಿದನು

|| ೮೮ ||

ಸುರರಿಗಭ್ಯುದಯಂ ಸುರೇಶಂಗೆ ವೈಭವಂ |
ಸುರಮುನೀಂದ್ರರ್ಗೆ ಪರಮಾನಂದಸಂಪದಂ |
ಸುರರಿಪುಗಳೞಿವು ಭೂಸುರರುೞಿವು ಸಮನಿಸಿತು ನಿನ್ನ ನರನಟನೆಯಿಂದ ||
ಧರೆಗೆ ಮಂಗಳಮಾಯ್ತು ಮೇಣೆಮ್ಮ ಪರಿತೋಷ |
ಶರಧಿಗುತ್ಸವಮಾಯ್ತು ಬಹುರೂಪಭೃತ್ತ್ವಮಂ |
ಮೆಱೆದೆ ನಿನ್ನವತರಣೆ ಲೇಸು ಪೊಸತಾದುದೆಂದಭವನಭಿವಂದಿಸಿದನು ||೮೯||

ವಿನಮಿತರನೆತ್ತಿ ಕುಳ್ಳಿರವೇೞ್ದು ಕಾಣ್ಕೆಗಳ |
ನನಿತುಮಂ ಕೈಕೊಂಡಿದಿರ್ಪರಿದು ನಲಿವ ಪುರ |
ಜನಮನಂತಿರವೇೞ್ದು ಸಂತೈಸಿ ವಂದಿಮಾಗಧರನಾಪಾಠಕರನು ||
ಮುನಿಗಳ ಪೊಗೞ್ಕೆಯಂಡಲೆಗೆ ಕೆಲದವನಿನಂ |
ದನೆಯ ಮೊಗ ನೋಡಿ ನಸುನಗುತಾರಘೂದ್ವಹಂ |
ವಿನಯಭಾವಂ ಪೊಣ್ಮೆ ಕರುಣರಸಮೊಸಱೆ ಮುಂ ನೆರೆದ ಸಭೆಗಿಂತೆಂದನು

|| ೯೦ ||

ಪರಿಭವಿಸಲಾರ್ಗೆ ಗೋಚರಮಕಟ ಶರಣಜನ |
ಸುರಧೇನುವಂ ವಿಭೀಷಣನಂ ಲಸದ್ಧರ್ಮ |
ನಿರತನಂ ಬಿದಿಯೊಲ್ದು ಸೃಜಿಸದೊಡೆ ಸೇತುಬಂಧದ ಕಜ್ಜದುಜ್ಜುಗದೊಳು ||
ವರುಣಂ ಸಹಾಯಮಿಾಯದೊಡೆ ನಿಜಸೇನೆ ಸಹಿ |
ತರುಣಜಂ ನೆರವಾಗದೊಡೆ ಲಂಕೆಗೈದಿ ದಶ |
ಶಿರನಂ ಬಲಪ್ರಚುರನಂ ತ್ರಿಭುವನೈಕವಿಕ್ರಮನಂ ಯಮೋಪಮನನು || ೯೧ ||

ಇಂದುಶೇಖರನ ಕೃಪೆ ಮೊದಲೆಮ್ಮೊಳಾಯ್ತು ದಿವ |
ದಿಂದಿಂದ್ರನೆಡೆಯ ಮಾತಲಿ ಯುದ್ಧಕಾರ್ಯದೊಳ್ |
ಬಂದೊದವಲನುವಾಯ್ತು ತಿಳಿವೊಡನಲಾತ್ಮಜಮರುತ್ಸುತರ ನೆರವೆಮ್ಮೊಳು ||
ಅಂದಿಂದುವರೆಗೆ ಸಮನಿಸಿತು ನೆರೆದಖಿಳಮುನಿ |
ವೃಂದದಾಶೀರ್ವಾದಮೋವಿತಲ್ಲದೊಡದೇಂ |
ಮಂದಪ್ರತಾಪನೆ ದಶಾಸ್ಯನವನಂ ಗೆಲ್ದೆವೆಂದೊಡಿದು ಚಿತ್ರಮಲ್ತೆ || ೯೨ ||

ಹರಮಿತ್ರನಾದ ಕತದಿಂದೆಮಗೆ ಮಿತ್ರನಾ |
ತುರಗವಾಹಂ ನಿರೃತಿಯಿಷ್ಟನೆಮ್ಮನ್ವಯದ |
ಪಿರಿಯನಣುಗಂ ಜಗುನೆಯಣ್ಣನುಟಿದಮರರೆಮ್ಮವರೀಸಮಸ್ತನೃಪರು ||
ನೆರೆವೊಟಲರೆಮ್ಮ ಕಾರಿಯಮೆ ಎಮ್ಮಭ್ಯುದಯ |
ದಿರವೆ ನಿಮ್ಮವು ನಿಮ್ಮ ಸರ್ವರುಪಕೃತಿಯಿಂದೆ |
ನೆರೆ ಧನ್ಯನಹೆನೆಂದು ನಿಖಿಲರಂ ದಯದಿನಾದರಿಸಿದಂ ರಾಜಮೌಳಿ || ೯೩ ||

ಇಂತುಚಿತಮೃದುಮಧುರವಚನರಚನೆಗಳಿಂ ಪು |
ರಾಂತಕಪ್ರಮುಖದೇವರ್ಕಳಂ ಮನ್ನಿಸಿ ಸ |
ಮಂತಖಿಳಮುನಿವರರನಾದರಿಸಿ ಸಾಮಂತಸಂದೋಹಮಂ ಕರುಣಿಸಿ ||
ಮುಂತಿರ್ಪ ಪುರದ ಮನ್ನೆಯರನುಪಚರಿಸಿ ಭೂ |
ಕಾಂತನೆಲ್ಲರ್ಗೆ ಸರಿಯುಡುಗೊಱೆಯನೊಪ್ಪಿಸಿ ದಿ |
ಶಾಂತವಿಶ್ರಾಂತನಿಜಕೀರ್ತಿಯೊಡನವರನೆಲ್ಲಂ ಬೞಿಕ ಬೀೞ್ಕೊಟ್ಟನು ||೯೪||

ನ್ಯಾಯಧರ್ಮವನುೞಿದು ಶಿಕ್ಷೆರಕ್ಷಣೆಗಳಾ |
ಮ್ನಾಯಧರ್ಮವನುೞಿದು ಭಕ್ತಿಭಾವನೆಗಳಾ |
ತ್ಮೀಯಧರ್ಮವನುೞಿದು ಸಾಮಸಂಗ್ರಾಮಂಗಳಾಗವೆನೆ ಧರ್ಮವಱಿತು ||
ರಾಯರೀಬೞಿಯೊಳಿಂತಿರ್ದರಿಲ್ಲೆನೆ ಪೂರ್ವ |
ದಾಯಮಂ ಬಿಡದೆ ಶಕ್ತಿತ್ರಯಂ ತನಗೆ ಸಮ |
ವಾಯಲಕ್ಷಣಮಾಗೆ ಲಕ್ಷ್ಮೀಮನೋಹರಂ ಧರೆಯನಾಳುತ್ತಿರ್ದನು || ೯೫ ||

ಪೆಡೆಮಣಿಯ ಬೆಳಕು ನಗೆಮೊಗದ ಬೆಳಗಂ ಬೆರೆಯೆ |
ನುಡಿಯ ಬಿನ್ನಾಣಮಱಿವಿನ ನಿಱಿಗೆಯಂ ಕೂಡೆ |
ಸೆಡೆದ ನವರಸದೊಡನೆ ಭಕ್ತಿರಸಮೊಂದೆ ನಾಗೇಂದ್ರಂ ಮುನೀಶ್ವರಂಗೆ ||
ಮುಡಿಯದೀಚರಿತಮಿಾಬಾಯ್ಗಳಿಂ ಪೇಳ್ದುಮೆನೆ |
ಕಡುನೇಹದಿಂದೊರೆದ ಕಥೆಯನತಿಭಕ್ತಿಯಿಂ |
ಬಿಡದೋದಿ ಕೇಳ್ವ ಸಜ್ಜನರಿಗಿಷ್ಟಾರ್ಥಮಂ ಕುಡುವನಾಶ್ರೀರಾಮನು || ೯೬ ||

ಪಡುಗಡಲ್ಗಡೆಯೊಳೀಱಿಡೆಯಂ ಭೃಗೂದ್ವಹಂ |
ಪಡೆದನದಱೊಳ್ ಸೃಪಿಗೆಡೆಯಾಗಿ ಕನ್ನಡದ |
ನುಡಿವೆಣ್ಗೆ ಭರ್ತೃಮಂದಿರಮಾಗಿ ಸುಖಕೆ ಬೀಡಾಗಿ ನಾಡಾಗಿ ಮೆಱೆವ ||
ಉಡುಪಪುರಮೆಂಬ ಸುಕ್ಷೇತ್ರಮುಂಟಲ್ಲಿ ಚಾ |
ವಡಿರಂಗಭಟ್ಟನಾತ್ಮಜೆ ಮಹಾಲಕ್ಷ್ಮಿಕ |
ನ್ನಡಿತಿ ಚೆಂಗಳದೇವಿ ಪೇೞೆಂದು ಪೇೞ್ ನೆಱೆ ಪೇೞ್ದಳೀಸತ್ಕೃತಿಯನು |
|| ೯೭ ||

# ಶಬ್ದಕೋಶ

## ಅ

ಅಕಳಂಕ ಕೀರ್ತಿ....ನಿರ್ಮಲವಾದ ಯಶಸ್ಸು

ಅಕ್ಕಜ....ಆಶ್ಚರ್ಯ

ಅಕ್ಕಱು....ಪ್ರೀತಿ

ಅಕ್ಕರವಿದ್ಯೆ....ಬ್ರಹ್ಮಸ್ವರೂಪಿಣಿ

ಅಕೂಪಾರ....ಸಮುದ್ರ

ಅಗಿ .. ಭಯಪಡು

ಅಗ್ನಿಮೊಗರು....ದೇವತೆಗಳು

ಅಗುರ್ವಿಸಿದ....ಮೇಲೆಬಿದ್ದ

ಅಗೆ....ಸಸಿ

ಅಗ್ರಜ....ಅಣ್ಣ

ಅಗ್ರಭವ....ಅಣ್ಣ

ಅಚಲ....ಭೂಮಿ, ಬೆಟ್ಟ

ಅಚಲಮುಖ್ಯ....ಚಿತ್ರಕೂಟ

ಅಚ್ಚರಸಿ....ಅಪ್ಸರಸಿ

ಅಚ್ಚರಿ....ಆಶ್ಚರ್ಯ

ಅಚ್ಚ....ಬಿಳಿಯ

ಅಜ....ಆಡು

ಅಜಸ್ರಂ....ಯಾವಾಗಲೂ, ಸದಾ

ಅಟ್ಟಸ....ಅಟ್ಟಹಾಸ

ಅಟ್ಟುಳಿ....ಸಂತಾಪ

ಅಟ್ಟೆ....ದೇಹ

ಅಡಗು....ಮಾಂಸ

ಅಡರ್ದು....ಏರಿ

ಅಡಸಿದ....ಪ್ರಾಪ್ತವಾದ

ಅಡಿನೆೞಲ್ಬಾೞ್ತೆ....ಅಡಿನೆಳಲ ರೀತಿ

ಅಣಿಯರಂ....ಉಚಿತ ರೀತಿಯಲ್ಲಿ; ವಿಶೇಷವಾಗಿ

ಅಣುಗಿ....ಮಗಳು

ಅಣ್ಪು....ತೇದ ಗಂಧ

ಅತಸೀಕುಸುಮ....ಅಗಸೆ ಹೂವು

ಅತಿಕಠಿಣಸ್ವಭಾವೆ....ಹಠದ ಸ್ವಭಾವದವಳು; ಕಠಿಣವಾದ ಶಬ್ದಗಳನ್ನು ಉಳ್ಳದ್ದು

ಅತಿಬಲಾಯನ....ಕಿಟಕಿ

ಅತುಲ....ಅಸದೃಶ

ಅತುಲಿತ....ಹೋಲಿಕೆಯಿಲ್ಲದ

ಅದಟು....ಪರಾಕ್ರಮ

ಅದಿರೆ....ಅಲುಗಾಡಲು, ನಡುಗಲು

ಅಧ್ವ....ದಾರಿ

ಅಧಿನಾಥ....ದೊರೆ; ಯಜಮಾನ

ಅನಘರ್....ಪಾಪವಿಲ್ಲದವರು

ಅನಲ....ಬೆಂಕಿ

ಅನಿಬರ್....ಅಷ್ಟು ಮಂದಿ

ಅನಿಮಿಷ....ಮೀನು, ದೇವತೆ

ಅನಿಲ....ಗಾಳಿ

ಅನಿಶಂ....ಯಾವಾಗಲೂ

ಅನುನಯ....ಪ್ರೀತಿ

ಅನುವರ....ಯುದ್ಧ

ಅನಂತ....ಅನೇಕ; ಆದಿಶೇಷ

ಅನ್ನವರೆಗಂ....ಅಲ್ಲಿಯವರೆಗೂ

ಅನ್ನಯ....ಅನ್ಯಾಯ

ಅನ್ವಯ....ವಂಶ

ಅನ್ವಿತ....ಕೂಡಿದ

ಅಪತ್ಯ....ಮಗ
ಅಪಾಂಗ....ಕಡೆಗಣ್ಣ ನೋಟ
ಅಬ್ಜಭವ....ಬ್ರಹ್ಮ
ಅಬ್ಜಾಂಬಕೀಬೃಂದ....ಸ್ತ್ರೀಸಮೂಹ
ಅಬ್ಬೆಗಬ್ಬ....ತಾಯಿಗರ್ಭ
ಅಬ್ಜ....ಚಂದ್ರ, ಕಮಲ
ಅಬ್ದ....ವರ್ಷ
ಅಬ್ಧಿ....ಸಮುದ್ರ
ಅಭವ....ಹುಟ್ಟು ಇಲ್ಲದವನು; ಈಶ್ವರ
ಅಭಾವಜನ್ಮ....ಈಶ್ವರಸಂಬಂಧವಾದ ಜನ್ಮ; ಸಂಸಾರಸಂಬಂಧವಾದ ಜನ್ಮವಿಲ್ಲದ
ಅಭ್ರಗಂಗಾ....ಆಕಾಶಗಂಗೆ
ಅಮಲ....ಶ್ರೇಷ್ಠವಾದ, ಶುಭ್ರವಾದ, ಬಿಳುಪಾದ
ಅಮರವರ್ಧಕಿ....ದೇವತೆಗಳ ಬಡಗಿ
ಅಮರ್ಚಿ....ಸೇರಿಸಿ
ಅಮರ್ದು....ಅಮೃತ
ಅಮೋಘ....ನಾಶರಹಿತ
ಅಮೃತ....ಸೀಪು
ಅರಸಂ....ರಸವಿಲ್ಲದವನು
ಅರಿದಲ್ಲ....ಅಸಾಧ್ಯವಲ್ಲ
ಅರುಣಜ....ಸುಗ್ರೀವ
ಅರೆವೆಱೆ....ಅರ್ಧಚಂದ್ರ
ಅರ್ಕ....ಸೂರ್ಯ
ಅರ್ಣವ....ಸಮುದ್ರ
ಅರ್ಯಮ....ಸೂರ್ಯ
ಅಱಿ....ತಿಳಿ
ಅಱೆ....ಬಂಡೆ
ಅಲಕಿ....ಮುಂಗುರುಳು ಉಳ್ಳವಳು
ಅಲಂಕಾರ....ಉಪಮಾದಿ ಕಾವ್ಯದ ಅಲಂಕಾರಗಳು; ಕಡಗಾದಿ ಸ್ತ್ರೀಯರ ಅಲಂಕಾರಗಳು
ಅಲರುಪೊಡೆಯನ್....ವಿಷ್ಣು; ಪದ್ಮನಾಭನು
ಅಲಸವೆ....ಆಲಸ್ಯವಿಲ್ಲದೆ
ಅವನಿಸುತೆ....ಸೀತೆ
ಅವನೀಧರ....ಪರ್ವತ
ಅವನೀರುಹ....ಮರ
ಅಶನಿಗೋಪ....ಕೆಂಪು ಹುಳ; ಕೆಂಪು ಹರಳು
ಅಶನಿ....ವಜ್ರಾಯುಧ; ವಜ್ರ
ಅಸತ್....ಕೆಟ್ಟ
ಅಸದಳ....ಅಸಾಧ್ಯ
ಅಸವಸವೆ....ಬೇಗಬೇಗನೆ
ಅಸಿದು....ಹಸಿದು (?); ಚಲಿಸಿ (?)
ಅಸು....ಪ್ರಾಣ
ಅಸುರ....ರಾಕ್ಷಸ
ಅಹನು....ಆಗುವನು
ಅಹಿ....ಹಾವು
ಅಹಿಮಕರ....ಸೂರ್ಯ
ಅಳರ್ದು....ಭಯಪಟ್ಟು
ಅಳವಡು....ಹೊಂದು; ಕೂಡು
ಅಳಿ....ದುಂಬಿ
ಅಳುರ್ಕೆ....ಆವರಿಸುವಿಕೆ
ಅಳ್ಕಿ....ಹೆದರಿ
ಅೞಿಸು....ನಾಶಮಾಡು; ಕಳೆ
ಅೞಿಯಾಸೆ....ಕೆಟ್ಟ ಆಸೆ; ತುಚ್ಛ ಆಸೆ
ಅೞ್ತಿ....ಪ್ರೀತಿ
ಅೞುಂಬಮ್....ಅತ್ಯಧಿಕವಾಗಿ

## ಆ

ಆಕಲಿತ....ಕೂಡಿದ
ಆಗಮ....ಶಾಸ್ತ್ರ
ಆ ಜೀವ....ಆ ಪ್ರಾಣಿ
ಆಣೆ....ಆಜ್ಞೆ, ಭಾಷೆ
ಆಣ್ಮ....ಒಡೆಯ
ಆತ್ಮಜ....ಮಗ
ಆತ್ಮಜಾತೆ....ಮಗಳು
ಆತ್ಮಜೆ....ಮಗಳು (ಸೀತೆ, ಪಾರ್ವತಿ)
ಆತ್ಮಸಂಭವ....ಮನ್ಮಥ
ಆರ್ತರೇ....ಸಮರ್ಥರೇ
ಆನಕ....ಭೇರಿ
ಆನನ....ಮುಖ
ಆಮ್ನಾಯ....ವೇದ
ಆಯತ....ವಿಸ್ತಾರವಾದ
ಆರೈದು....ವಿಚಾರಿಸಿ
ಆಲ್ಪರಿಸೊ....ಹುಯ್ಲಿಗಿದಿಸೋ
ಆವಗಂ....ಯಾವಾಗಲೂ, ಸದಾ
ಆವಳಿ....ಸಮೂಹ, ಗುಂಪು, ಸಾಲು
ಆವಿಗೆ....ಬೆಂಕಿಯ ಕುಂಡ
ಆವೃತ....ಸುತ್ತಲ್ಪಟ್ಟ
ಆಶಿಷ....ಹರಕೆ
ಆಶುಶುಕ್ಷಣಿ....ಬೆಂಕಿ
ಆಹವ....ಯುದ್ಧ
ಆಳಿ....ಸಖಿ

## ಇ

ಇಂದು....ಚಂದ್ರ
ಇಕ್ಕೆ....ವಾಸಸ್ಥಾನ
ಇರ್ಕಡೆ....ಎರಡೂ ಕಡೆ
ಇರ್ಕೆ....ಆಶ್ರಯ (ನಾ) ; ಇರಲಿ (ಕ್ರಿ)
ಇರ್ಚಿಡಿಪ....ತುಳಿತದಿಂದ ಕತ್ತರಿಸಲ್ಪಟ್ಟ
ಇನ....ಒಡೆಯ
ಇಲ್ರಿಹಿ....ಬಾಗಿ
ಇಱ್ರಿಸಿಲ್....ಇರಿಚಲು, ಮೃಗವನ್ನು ಕೆಡಹುವ ಗುಳಿ, ಬಿರುಗಾಳಿ (?)
ಇಱ್ರುಂಪೆ....ಇರುವೆ
ಇಱ್ರುಂಬು....ಮೃಗವನ್ನು ಕೆಡಹಲು ಒಡ್ಡುವ ಗುಳಿ

## ಈ

ಈಗೆ....ಕೊಡಲಿ
ಈಂಟುಗೆ....ಹೀರಲಿ
ಈಡಿಱ್ರಿದ—ಹೆಚ್ಚಾಗಿ ಹಿಂಸಿಸಿದ
ಈರೇಳ್ಬಾಲ....೧೪ ವರುಷ

## ಉ

ಉರ್ಚಿ....ಮೇಲೆ ಬಿದ್ದು
ಉಜ್ಜುಗಿಪ....ಉದ್ಯೋಗಿಸುವ; ಪ್ರಯತ್ನಿಸುವ
ಉಣ್ಮು....ಹೊಮ್ಮಲು
ಉಡುಪಪುರ....ಉಡುಪಿ
ಉತ್ತಮಾಂಗ....ತಲೆ
ಉತ್ತರಿಸಿ....ದಾಟಿ
ಉತ್ಸ....ಒರತೆ
ಉದಿಪ....ಹುಟ್ಟುವ
ಉನ್ಮಿಲಿತ....ಪ್ರಕಾಶಿತವಾದ; ಉತ್ತೇಜಿತವಾದ; ಅಲಂಕೃತವಾದ
ಉಪಟಳ....ತೊಂದರೆ
ಉಪರಾಗ....ಗ್ರಹಣ; ಕತ್ತಲು
ಉಪಲಬ್ಧಮಕ್ಕು....ದೊರೆಯುತ್ತದೆ
ಉಪಪತಿ....ಪೆಟ್ಟು
ಉಪ್ಪರಂ....ಎತ್ತರದಲ್ಲಿ
ಉಮ್ಮಳ....ವ್ಯಥೆ
ಉರ್ವರೆ....ಭೂಮಿ
ಉರಿಪಿ....ಸುಟ್ಟು
ಉಬ್ಬಿ....ಹೆಚ್ಚಾಗಿ
ಉಲೂಪಿ....ಕಡಲ ಹಂದಿ
ಉಷ್ಟ್ರ....ಒಂಟೆ
ಉಸಿಕನೆ....ಮೌನದಿಂದ
ಉಳ್ಕೆ....ಹೊಳೆಯಲು; ನಡುಗಲು
ಉಳ್ಳೊಡೆ....ಇದ್ದರೆ

## ಊ

ಊಣೆಯ....ಕೊರತೆ
ಊರ್ಧ್ವ....ಮೇಲೆ

## ಋ

ಋಣಶೇಷ....ಹಿಂದಿನ ಕವಿಗಳಿಂದ ಕೊಂಡ ಪದ, ಅಭಿಪ್ರಾಯ ಮುಂತಾದುವು; ಹಳೆಯ ಬಾಕಿ

## ಎ

ಎಡ್ಡಮ್....ಮನೋಹರವಾಗಿ
ಎಣ್ದೆಸೆ....ಎಂಟು ದಿಕ್ಕು
ಎಣ್ಮಯ್ಯವರ್....ಎಂಟು ಮೈಯುಳ್ಳವನು; ಶಿವ
ಎಡೆಗಾಲಿ....ಎರಡು ಚಕ್ರ; ಒಂದು ಜೊತೆ ಚಕ್ರ
ಎಯ್ದೆ....ಚೆನ್ನಾಗಿ
ಎರಳೆಗಣ್....ಜಿಂಕೆಯ ಕಣ್ಣು
ಎಱಕ....ಪ್ರೀತಿ
ಎಱಗಿ....ನಮಸ್ಕರಿಸಿ
ಎಱೆಮನವರ್....ನೀರಾದ ಮನಸ್ಸು
ಎಱೆಯ....ಗಂಡ

ಎಲರ್....ಗಾಳಿ
ಎಲೆವನೆ....ಪರ್ಣಕುಟಿ
ಎಸಗಿ....ಮಾಡಿ
ಎಸೆ....ಪ್ರಕಾಶಿಸು

## ಏ

ಏಗಳುಂ....ಸದಾ
ಏಗೆಯ್ವುದು....ಏನು ಮಾಡುವುದು
ಏಱಾಱಿ....ಉಬ್ಬರವಿಳಿತ
ಏನೇೞ್ವೆನು....ಏನು ಹೇಳಲಿ
ಏಳಿಸಿತು....ಧಿಕ್ಕಾರಮಾಡಿತು

## ಐ

ಐದೆ....ಚೆನ್ನಾಗಿ
ಐಸರ....ಐವೆಳೆ ಸರ

## ಒ

ಒಕ್ಕಣಿಸು....ಹೇಳು
ಒಟ್ಟಜ....ಕಪ್ಪಕಾಣಿಕೆ
ಒಟ್ಟೈರ್....ಇಷ್ಟಪಡರು
ಒಟ್ಟೆಗ....ಸೇವಕ, ಒಂಟಿಗ
ಒಡರ್ಚಿದ....ಉಂಟಾದ
ಒಡರ್ಚುಗೆ....ಮಾಡಲಿ
ಒಪ್ಪಂಬೂಸಿ....ಚೆನ್ನಾಗಿ ಬಳಿದು
ಒರೆ....ಹೇಳು
ಒವರ್ಣ....ಮೈಜೋಡು; ಕಬ್ಬಿಣದ ಕವಚ; ರೆಕ್ಕೆಯ ಬಲ
ಒರ್ಮೆ....ಒಂದು ಸಾರಿ
ಒಸರೆ....ನೀರು ಸುರಿಯಲು
ಒಸೆದು....ಇಷ್ಟಪಟ್ಟು
ಒಳರ್ದು....ಕೂಗಿಕೊಂಡು
ಒಳರೆ....ಗರ್ಜಿಸಲು
ಒಳ್ಪುಡೆ....ಒಳ್ಳೆಯ ಬಟ್ಟೆ

## ಓ

ಓಗರ....ಅನ್ನ
ಓಘ....ಸಮೂಹ; ಗುಂಪು
ಓವಳ್....ಪ್ರಿಯೆ; ಪ್ರೇಯಸಿ
ಓವು....ಪ್ರೀತಿಸು

## ಅಂ

ಅಂಕ....ಗುರುತು; ಮಧ್ಯ
ಅಂಚಿತ....ಪೂಜಿಸಲ್ಪಟ್ಟ
ಅಂಚೆ....ಹಂಸ
ಅಂತಕ....ಯಮ

ಅಂದಣ....ಪಲ್ಲಕ್ಕಿ
ಅಂಬರ....ಆಕಾಶ
ಅಂಬು....ಬಾಣ; ನೀರು
ಅಂಭಪ್ರಣಿಧಿ....ಮೋಡ
ಅಂಭೋಧಿ....ಸಮುದ್ರ

## ಕ

ಕಕ್ಷ....ಕಂಕುಳು
ಕಚ್ಛಪ....ಆಮೆ
ಕಜ್ಜ....ಕಾರ್ಯ
ಕಟಕ....ತಪ್ಪಲು
ಕಟಕಿ....ಹಾಸ್ಯ, ಅಣಕ
ಕಟ್ಟಿದಿರು....ನೇರವಾಗಿ ಇದಿರಿನಲ್ಲಿ
ಕಡವರ....ಚಿನ್ನ
ಕಡುಪು....ಉತ್ಸಾಹ
ಕಡೆವಗಲ....ಸಂಜೆಯು
ಕಣ್ಗೊಸಱ್....ನೋಡುವುದಕ್ಕೆ ಆಸೆಪಡಲು
ಕಣ್ಪುರುಳಿ....ಕಣ್ಣೆಂಬ ಪುರುಳಿ ಪಕ್ಕಿ; (ಹೆಣ್ಣು ಗಿಣಿ)
ಕಪಿಮುಖ....ನಂದಿ, ಸುಗ್ರೀವ ಪ್ರಮುಖರು
ಕಬ್ಬ....ಕಾವ್ಯ
ಕಬ್ಬಿಗ....ಕವಿ
ಕಂಬುಕಂಧರೆ....ಶಂಖದಂತೆ ಕೊರಳು ಉಳ್ಳವಳು
ಕಮಠ....ಆಮೆ
ಕಮಲ....ನೀರು
ಕಮಲಭವಸದನ....ಬ್ರಹ್ಮಲೋಕ
ಕಮಲಸಂಭವ....ಬ್ರಹ್ಮ
ಕಮಲೆ....ಲಕ್ಷ್ಮಿ
ಕಮ್ಮೆಣ್ಣೆ....ಪರಿಮಳದ ಎಣ್ಣೆ
ಕಮ್ಮೆಲರ್....ಕಂಪಿನ ಗಾಳಿ
ಕಂದರ....ಬೆಟ್ಟದ ತಪ್ಪಲು
ಕನ್ನದೊಡವು....ಕರ್ಣಾಭರಣ
ಕದಿರ್ಪಗಲ್....ಕಿರಣಗಳ ಹಗಲು
ಕರ್ಕಸಿ....ಕರ್ಕಶೆ
ಕರಂಡ....ಕರಡಿಗೆ
ಕರಿ....ಆನೆ
ಕರ್ಚಿ....ತೊಳೆದು
ಕರ್ಬುಗೋಲು....ಕಬ್ಬಿನ ಕೋಲು
ಕಲ್ಪಭೂರುಹ....ಕಲ್ಪವೃಕ್ಷ
ಕವಿ....ಶುಕ್ರಗ್ರಹ; ಕಾವ್ಯಕರ್ತೃ
ಕಾಂಚಿ....ಸೊಂಟದ ಪಟ್ಟಿ; ಡಾಬು
ಕಾಪಥ....ಕೆಟ್ಟದಾರಿ; ಕಲ್ಲುಮುಳ್ಳುಗಳ ದಾರಿ
ಕಾಮ....ಮನ್ಮಥ, ಅರಿಷಡ್ವರ್ಗಗಳಲ್ಲಿ ಒಂದು
ಕಾಲಕರ್ಮ....ಕಾಲಕ್ರಮ; ಕಾಲಾನುಸಾರವಾದ ಲೆಕ್ಕಾಚಾರ
ಕಾೞ್ಮಿಗ....ಕಾಡು ಮೃಗ
ಕಾೞ್ತೊಱೆ....ಕಾಡಿನ ನದಿ
ಕಾೞ್ತೊಪ್ಚ....ಕಾಡುನದಿ
ಕಿತ್ತಡಿ....ಋಷಿ
ಕಿರಣಮಾಲಿ....ಸೂರ್ಯ
ಕೀೞ್ಪರಿವ....ಕೆಳಕ್ಕೆ ಹರಿವ
ಕೀೞೞೆ....ಪಾತಾಳ

ಕೀಶಬಲ....ಕಪಿಸೇನೆ
ಕೀಲಾಲ....ನೀರು
ಕುಡುವಳೆ....?
ಕುಠಾರಧಾರಿ....ಪರಶುರಾಮ
ಕುಪಿತನಾಗಿ....ಕೋಪಗೊಂಡವನಾಗಿ
ಕುಂತಲ....ಮುಂಗುರುಳು
ಕುಂಭಜನ್ಮ....ಕೊಡನಣುಗ; ಅಗಸ್ತ್ಯ
ಕುಂಭಿ....ನೀರಾನೆ
ಕುಂಭೀನಸ....ಆದಿಶೇಷ
ಕುಮಾರ....ಮಗ; ಭೂಮಿಯಲ್ಲಿ ಸುಂದರನಾದವನು; ದುಷ್ಟರನ್ನು ಶಿಕ್ಷಿಸುವವನು
ಕುರುಜು....ಫಲವಸ್ತ್ರ
ಕುಱುಪು....ಗುರುತು
ಕುಱುಂಬ....ಕುರುಬ
ಕುಲಿಶಶರೀರ....ವಜ್ರದೇಹಿ; ಹನುಮಂತ
ಕುಶ....ನೀರು
ಕೂರ್ಮೆ....ಪ್ರೀತಿ
ಕೆಂಗಣ್ಣು....ಕೋಗಿಲೆ
ಕೆಡೆ....ಬೀಳು
ಕೆತ್ತು....ನಡುಗು
ಕೆಳದಿ....ಸಖಿ
ಕೇತನ....ಬಾವುಟ, ಧ್ವಜ
ಕೇಯೂರ....ಅಂಗದ
ಕೈಗೈದುದು....ಯುದ್ಧಮಾಡಿದುದು
ಕೈತವ....ಮೋಸ
ಕೈದು....ಆಯುಧ
ಕೈರವ....ನೈದಿಲೆ
ಕೊಟ್ಟಿ....ಒಳಮನೆ
ಕೊಡನಣುಗ....ಅಗಸ್ತ್ಯ
ಕೋಡಗರು....ಕಪಿಗಳು
ಕೋವಿದ....ಪಂಡಿತ
ಕೋಲ್ಮೃಗ....ಕೋರೆಯಿರುವ ಮೃಗ
ಕೌಶಿಕ....ವಿಶ್ವಾಮಿತ್ರ

## ಖ

ಖಗ....ಪಕ್ಷಿ; ಸೂರ್ಯ

## ಗ

ಗಡಣ....ಸಮೂಹ
ಗತಿ....ಗಮನ; ಪದಜೋಡಣೆ
ಗಳ....ಕುತ್ತಿಗೆ
ಗಾಡಿ....ಸೌಂದರ್ಯ
ಗಿರಿಗರಿಷ್ಠ....ಪರ್ವತಶ್ರೇಷ್ಠ
ಗಿರಿಸುತೆ....ಪಾರ್ವತಿ, ಗಂಗೆ
ಗಿರೀಶ....ಹಿಮವಂತ
ಗುಡ....ಬೆಲ್ಲ
ಗುಮ್ಮ....ಕಾಡುಕೋಳಿ, ಗೂಗೆ
ಗುರು....ಉಪಾಧ್ಯಾಯ; ಬೃಹಸ್ಪತಿ
ಗೇಹ....ಮನೆ
ಗೊಂದಣ....ಸಮೂಹ
ಗೋತ್ರರಾಜ....ಹಿಮವಂತ
ಗೋತ್ರೇಶ್ವರ—ಭೂಮಿಗೆ ಒಡೆಯ, ಗಿರೀಶ
ಗಣ....ಸಮೂಹ, ಗುಂಪು
ಗಂಭೀರ....ಆಳ; ದೊಡ್ಡ ಗುಣ
ಗಾಂಪರು....ದಡ್ಡರು, ಮೂರ್ಖರು

## ಘ

ಘನ…. ಮೋಡ

ಘನಸಾರ…. ಪಚ್ಚಕರ್ಪೂರ

## ಚ

ಚಮರೀಮೃಗ…. ಚಾಮರ

ಚಯ…. ಗುಂಪು, ಸಮೂಹ

ಚರ…. ಸೇವಕ

ಚಲತ್…. ಚಲಿಸುತ್ತಿರುವ

ಚಂಪಕ…. ಸಂಪಗೆ

ಚಿತ್ರಕಾಯ…. ಹುಲಿ

ಚಿತ್ರಿಕ…. ಚಿತ್ರಗಳನ್ನು ಬರೆಯುವವನು

ಚಿದ್ಭಾನು…. ಆತ್ಮನೆಂಬ ಸೂರ್ಯ

ಚೆಚ್ಚರ…. ಶೀಘ್ರ

ಚೆಂಬವಳ…. ಕೆಂಪು ಹವಳ

ಚೋದ್ಯ…. ಆಶ್ಚರ್ಯ

## ಜ

ಜಕ್ಕವಕ್ಕಿ…. ಚಕ್ರವಾಕ ಪಕ್ಷಿ

ಜಗತ್ಪ್ರಾಣ…. ವಾಯು

ಜಗುನೆ…. ಯಮುನೆ

ಜಗುನೆಯಣ್ಣ…. ಯಮ

ಜಘನ…. ನಿತಂಬ

ಜಘನ್ಯಜರು…. ಕೀಳುಜಾತಿಯಲ್ಲಿ ಹುಟ್ಟಿದವರು

ಜಟಾಜೂಟ…. ಶಿವ

ಜಡ…. ಜಲ; ನೀರು; ಜಡತ್ವ; ಸೋಮಾರಿತನ

ಜನ್ನ…. ಯಜ್ಞ

ಜಲಗ್ರಾಹ…. ಮೊಸಳೆ

ಜಲವಾಜಿ…. ನೀರುಕುದುರೆ

ಜವ…. ವೇಗ, ಶೀಘ್ರ

ಜಸ…. ಕೀರ್ತಿ

ಜಾತ…. ಹುಟ್ಟಿದ

ಜೀವನ…. ಪ್ರಾಣ; ನೀರು

ಜೊನ್ನ…. ಬೆಳ್ದಿಂಗಳು

ಜೋಸೆಯರು…. ಹೆಂಗಸರು

ಜಂತದಹೆಗೆ…. ದಂತದ ಬಾಚಣಿಗೆ

## ಝ

ಝಲ್ಲರಿ…. ಕುಚ್ಚು

ಝಷಾಕೃತಿ…. ಮೀನಿನ ಆಕಾರ

## ತ

ತತಿ…. ಸಮೂಹ

ತನು…. ದೇಹ

ತನೂರುಹ…. ರೆಕ್ಕೆ

ತಜ್ಜಃಸಂದಂ…. ನಿಶ್ಚಯಿಸಿದನು

ತಲ್ಪ……ಹಾಸಿಗೆ
ತವಸಿ……ಮುನಿ; ಋಷಿ; ತಪಸ್ವಿ
ತವೆ……ಹೆಚ್ಚಾಗಿ
ತಳಿರಡಿ……ಚಿಗುರಿನಂತಹ ಅಂಗಾಲು
ತಾಣ……ಸ್ಥಳ
ತಾನ……ಸ್ಥಾನ
ತಾಪಸೌಘ……ಋಷಿಗಳ ಸಮೂಹ
ತಾರಕ……ತಾರಕನೆಂಬ ರಾಕ್ಷಸ
ತಾರಕ……ದಾಟಿಸುವ
ತಿರಿದು……ಸಂಚರಿಸಿ
ತಿರ್ಯಕ್ಚರನ್……ಅಡ್ಡಡ್ಡಲಾಗಿ ನಡೆವವನು
ತಿರೆ……ಭೂಮಿ
ತಿರ್ದುಗೆ……ತಿದ್ದಲಿ
ತೀವಿದೊಡೆ……ತುಂಬಿದರೆ
ತುಱುಗಿ……ವ್ಯಾಪಿಸಿ
ತೂಣಮನ……ಹುಚ್ಚು ಮನಸ್ಸು
ತೂಱ್ದು……ಸುಗ್ಗಿ
ತೂಳ್ದು……ಹಸರಿಸಿ
ತೆಳ್ಗದಪು……ತೆಳುವಾದ ಕೆನ್ನೆ
ತೆಂಗಡಲು……ದಕ್ಷಿಣಸಮುದ್ರ
ತೊಡವಿಲಿ ಕೊಡಂಕೆ……ತೊಡವು ಇಲ್ಲದ ಕಿವಿ
ತೊಱೆ……ನದಿ, ಹೊಳೆ
ತೋರ್ಕೆಗೆ……ಮೇಲುನೋಟಕ್ಕೆ
ತೋಷಿಸು……ಸಂತೋಷಗೊಳಿಸು
ತಂಗದಿರ……ಚಂದ್ರ
ತ್ರಿದಶ……ದೇವತೆ

## ದ

ದ……ಕೊಡುವ
ದಕ್ಷಿಣಾಶೆ……ದಕ್ಷಿಣದಿಕ್ಕು
ದನುಜೆ……ರಾಕ್ಷಸಿ; ಶೂರ್ಪಣಖಿ
ದಶಾಸ್ಯ……ರಾವಣ
ದಿಕ್ಕುಂಭಿ……ದಿಗ್ಗಜ
ದಿಗಧೀಶ……ದಿಕ್ಕುಗಳ ಒಡೆಯ
ದಶಕಂಧರ–ಹತ್ತು ಕತ್ತುಳ್ಳವನು; ರಾವಣ
ದಿಟ್ಟಿಸುತ……ನೋಡುತ್ತಾ
ದಿತಿಜ……ರಾಕ್ಷಸ; ರಾವಣ
ದಿತಿಸಂಭವರು……ದೇವತೆಗಳು
ದಿನಪಾತ್ಮಸಂಭವ……ಸುಗ್ರೀವ
ದಿವ……ಸ್ವರ್ಗ
ದಿವ್ಯಕೇಶ……ಸೊಗಸಾದ ತಲೆಕೂದಲು, ಆಕಾಶಸಂಬಂಧವಾದ ತಲೆಗೂದಲು
ದಿವಿಜ……ದೇವತೆ
ದಿಶಾಂತ……ದಿಕ್ಕಿನ ಕೊನೆ
ದೀಧಿತಿ……ಕಾಂತಿ
ದೀರ್ಘನಾಸಿಕ……ಸೊಂಡಿಲು, ಉದ್ದವಾದ ಮೂಗು
ದುಗುಡ……ದುಃಖ
ದುಗುಲ……ದುಕೂಲ; ಬಟ್ಟೆ
ದುಮ್ಮಾನ……ಸಂಕಟ
ದೇವಪಾಲ……ಇಂದ್ರ
ದೇಸೆ……ಸೊಗಸು
ದಂತಿ……ಆನೆ
ದಂಭೋಳಿ……ಸಿಡಿಲು
ಧುರಂಧರ……ಸಮರ್ಥ
ದ್ಯುತಿ……ಕಾಂತಿ
ದ್ರಾವಕ……ಪಾಪನಾಶಕ; ವೇಗಕಾರಕ

ದ್ರೋಣ....ಹಡಗು
ಧನಂಜಯ....ಅಗ್ನಿ
ಧನೇಶ್ವರ....ಕುಬೇರ
ಧರ್ಮರಾಜ....ಯಮ
ಧರಾಮರಜನ....ಬ್ರಾಹ್ಮಣರು
ಧಾತ್ರಿ....ಭೂಮಿ
ಧಾರಾಸಾರ....ಧಾರೆ ಧಾರೆಯಾದ ಮಳೆ
ಧುರ....ಯುದ್ಧ
ಧೂತಪಾಪೆ....ಗಂಗೆ
ಧೇನು....ಹಸು; ಕಾಮಧೇನು

## ನ

ನಕ್ರ....ಮೊಸಳೆ
ನದ....ಗಂಡುನದಿ
ನಭ....ಆಕಾಶ
ನಮುಚಿಸೂದನ....ಇಂದ್ರ
ನರವಾಹನ....ಕುಬೇರ
ನಲ್ವಾಯಿ....ಒಳ್ಳೆಯ ಬಾಯಿ
ನವಿರನ್....ತಲೆಗೂದಲನ್ನು
ನಸಿನಸಿನೆ....ತಿಳಿಯದಹಾಗೆ (?)
ನಾಣ್....ನಾಚಿಕೆ
ನಾಡೆ....ಹೆಚ್ಚಾಗಿ
ನಿಕರ....ಸಮೂಹ
ನಿಕ್ಕುವ....ನಿಶ್ಚಯ
ನಿಖಿಳ....ಸಮಸ್ತ
ನಿಗಮ....ವೇದ
ನಿಚ್ಚಂ....ನಿತ್ಯ
ನಿಟಿಲ....ಹಣೆ
ನಿಟ್ಟಿಸುತ....ನೋಡುತ್ತಾ
ನಿರವದ್ಯ....ದೋಷರಹಿತ
ನಿರಾಮಯ....ಅಪಾಯವಿಲ್ಲದ, ಅನಿಷ್ಟಗಳಿಲ್ಲದ
ನಿರ್ಜಿಗೆ....ಮುಡಿಕೆ
ನಿರುಪಾಧಿಯಿಂ....ಯಾವ ಉಪಾಧಿಯೂ ಇಲ್ಲದೆ
ನಿರ್ಜರರ್....ದೇವತೆಗಳು
ನಿರ್ಜರಾಗರ....ಮುಪ್ಪು ವಿಷವೂ ಇಲ್ಲದ; ಮುಪ್ಪೆಂಬ ವಿಷವಿಲ್ಲದ; ದೇವತೆಗಳಿಗೆ ಮನೆಯಾದ; ಅಳಿವಿಲ್ಲದ ಗಣಿಗಳು ಇರುವ
ನಿರ್ನೆರಂ....ಸುಮ್ಮಸುಮ್ಮನೆ; ಬರಿದೆ
ನಿದ್ರಾವಕ–ನಿಶ್ಶೇಷವಾಗಿ ನಾಶಪಡಿಸುವ
ನಿಲಿಂಪದೆಸೆ....ಆಕಾಶದತ್ತ
ನಿವಹ....ಸಮೂಹ
ನಿಸದಂ....ನಿಶ್ಚಯ
ನಿಸ್ವನ....ಧ್ವನಿ
ನಿಸ್ತುಲಿತ....ಸಮಾನವಿಲ್ಲದ
ನೀಕ್ಕಿ....ನೀಡಿ
ನೀಡುಂ....ಹೆಚ್ಚಾಗಿ
ನೀರದ....ಮೋಡ
ನೀರಾವಾಸ....ನೀರಿನ ವಾಸ
ನೀರ್ತರಗೊಂಡು....ನೀರುನೀರಾಗಿ
ನೀವೀತ....ಕತ್ತಿನ ಮೇಲೆ ಧರಿಸುವ ಶಲ್ಯ
ನುತ....ಶ್ರೇಷ್ಠವಾದ
ನೃಶಂಸ....ಕ್ರೂರಿ
ನೆಗಪಿ....ಎತ್ತಿ
ನೆಗಳ್ದ್....ಮೊಸಳೆ
ನೆಗಳ್ತೆ....ಪ್ರಸಿದ್ಧಿ

ನೆಗಳ್ವ…ಮಾಡುವ
ನೆರವಿ…ಸಮೂಹ
ನೆರೆವೊೞಲರ್…ಸಹಾಯಕರು; ನೆರೆಯೂರಿನವರು
ನೇರ್ಪಣೆ…ನೇರಾದ ಹಣೆ
ನೇಸಱ್…ಸೂರ್ಯ
ನೋಂತ…ವ್ರತತೊಟ್ಟ
ನೋಂಪಿ…ವ್ರತ
ನ್ಯಸ್ತಮಾನಸ…ನಟ್ಟ ಮನಸ್ಸು

## ಪ

ಪಕ್ಕಾಗೆ…ಗುರಿಯಾಗೆ
ಪಚ್ಚ…ಆಭರಣ
ಪಂಚಮಗಾನೆ…ಪಂಚಮ ಸ್ವರವಂತಿರುವ ಒಳ್ಳೆಯ ಮಾತುಳ್ಳವಳು
ಪಂಚಾಸ್ಯ…ಸಿಂಹ
ಪಟ್ಟೆ…ಮಲಗಿ
ಪಟ್ಟುಡೆ…ರೇಷ್ಮೆವಸ್ತ್ರ
ಪಟ್ಟುೞಿದು–ಹಿಡಿತದಿಂದ ತಪ್ಪಿಸಿಕೊಂಡು
ಪಡಲಿಟ್ಟ…ಚೆಲ್ಲಾಪಿಲ್ಲಿಯಾದ
ಪಡಿ…ಪ್ರತಿ; ಬಾಗಿಲು
ಪಡುಗಡಲು…ಪಶ್ಚಿಮ ಸಮುದ್ರ
ಪಂಡಿತ…ಪಂಡಿತವಕ್ಕಿ, ಗಿಣಿ
ಪತಂಗ…ಸೂರ್ಯ
ಪದ…ಪಾದ; ಪದ್ಯ, ತಪ್ಪಲು, ರಾಜ್ಯಾಧಿಕಾರ
ಪದ್ಯಾವಳಿ…ಕಾಲುದಾರಿ
ಪಯ…ನೀರು
ಪರಿಗೆ....ಗುರಾಣಿ
ಪರಿಜನ…ಸೇವಕರು; ಪರಿವಾರದವರು
ಪರಿಮಿತ…ಹಿತಮಿತವಾದ
ಪರಿಲಸಿತ…ಪ್ರಕಾಶ
ಪರಿವಿಡಿ…ಸಾಲು
ಪವಡಿಸಿದ....ಮಲಗಿದ
ಪವಮಾನ....ಗಾಳಿ
ಪಸದನಂ....ಪ್ರಸಾಧನ; ಅಲಂಕಾರ
ಪೞಮಾತು....ಹಳೆಯ ಮಾತು; ವೇದ; ಮಹಾಭಾರತ
ಪಾಟಲಾನನೆ....ಪಾಟಲದ ಹೂವಿನಂತೆ ಕೆಂಬಣ್ಣದ ಮೊಗವುಳ್ಳವಳು
ಪಾದಜ…ಶೂದ್ರ
ಪಾವಕ....ಅಗ್ನಿ
ಪಾವನಿಸಿ....ಶುದ್ಧಳನ್ನಾಗಿ ಮಾಡಿ
ಪಾಱ್....ವಿಮಾನ
ಪಿಕ....ಕೋಗಿಲೆ
ಪಿಂಜಗುೞಲು…ಹಿಂದಕ್ಕೆ ಜಾರಲು
ಪಿಡಿಗೊರಲು....ಸಣ್ಣ ಕಂಠ
ಪಿಪಾಸೆ…ಬಾಯಾರಿಕೆ
ಪಿಪೀಲಿಕ…ಇರುವೆ
ಪಿಂಪಾೞ್ವೆ…ಹಿಂದೆ ನಡೆದ ವಿಚಾರ
ಪಿನ್ಮೆಯ್ಯೊಳ್....ಹಿಂದಿನ ಜನ್ಮದಲ್ಲಿ
ಪಿಶುನನ್....ಚಾಡಿಕಾರ
ಪಿೞಿ....ಹಿಳಿ; ಹಿಂಡು

**ಪೀಯೂಷ**....ಅಮೃತ
**ಪುಂಜ**....ಸಮೂಹ, ಗುಂಪು
**ಪುಂಡ್ರತ್ರಯ**....ಮೂರು ನಾಮ
**ಪುಣ್ಯಜನ**....ಒಳ್ಳೆಯ ಜನ (ವಿಭೀಷಣ, ನಿರುತಿ, ಕುಬೇರ)
**ಪುಂಡರೀಕ**....ಪುಂಡರೀಕ ಎಂಬ ನಾಗ, ಬೆಳ್ಗೊಡೆ, ಹುಲಿ
**ಪುದಿದುದು**....ವ್ಯಾಪಿಸಿತು
**ಪುರಾಂತಕ**....ಈಶ್ವರ
**ಪುರುಳ್**....ಸಾರ; ಪ್ರಯೋಜನ
**ಪುಳಿನ**....ಮರಳು
**ಪೂಣ್ದ**....ಸಂಕಲ್ಪಮಾಡಿದ
**ಪೆಕ್ಕಳಂ**....ಹೆಚ್ಚಾಗಿ
**ಪೆಡಮೆಟ್ಟೆ**....ಹಿಮ್ಮೆಟ್ಟೆ
**ಪೆಣ್ಗಟ್ಟಿ**....ಹೆಣ್ಣುಕತ್ತೆ
**ಪೆರ್ದೆರೆ**....ದೊಡ್ಡ ತೆರೆ
**ಪೆಱೆ**....ಚಂದ್ರ
**ಪೆಳರ್ದು**....ಭಯಪಟ್ಟು
**ಪೇರಡವಿ**....ದೊಡ್ಡ ಕಾಡು
**ಪೊಡರೆ**....ನಡುಗಲು
**ಪೊಣ್ಮಿರೆ**....ಹೊಮ್ಮಿರಲು
**ಪೊಣರ್ಕೆ**....ಜಗಳ
**ಪೊದಳ್ದು**....ವ್ಯಾಪಿಸಿದ
**ಪೊಂಜುಂಗೆ**....ಚಿನ್ನದ ಸರಿಗೆ
**ಪೊನಲ್**....[illegible]
**ಪೊಮ್ಮಿಗ**....ಬಂಗಾರದ ಜಿಂಕೆ; ಬಂಗಾರದ ಮೃಗ
**ಪೊರೆಗೆ**....ಕಾವಲಿ
**ಪೊಱತು**....ಹೊರತು
**ಪೊೞ್ತು**....ಹೊತ್ತು
**ಪೊೞಲು**....ಪಟ್ಟಣ
**ಪ್ರಖರ**....ಸಮೂಹ
**ಪ್ರಗ್ರಹ**....ಹಗ್ಗ
**ಪ್ರಮದ**....ಹೆಚ್ಚಾದ ಮದ
**ಪ್ರವರ**....ಮುಖ್ಯ, ಶ್ರೇಷ್ಠ
**ಪ್ರವಾಹಾಘಟೆ**....ಹವಳದ ಬಣ್ಣದಂತೆ ತುಟಿಯುಳ್ಳವಳು

## ಫ

**ಫಣಿವೇಣಿ**....ಹಾವಿನಂತೆ ನಿಡಿದಾದ ಜಡೆಯುಳ್ಳವಳು

## ಬ

**ಬಗ್ಗದೊವಲು**....ಹುಲಿಯ ಚರ್ಮ
**ಬಗೆ**....ಮನಸ್ಸು
**ಬಜ್ಜರ**....ವಜ್ರ
**ಬಡಬಾನಲ**....ಸಮುದ್ರದ ಒಳಗಣ ಬೆಂಕಿ
**ಬಣಗು**....ನಿಷ್ಪ್ರಯೋಜಕ
**ಬದ್ದಣ**....ಮಂಗಳವಾದ್ಯ
**ಬನ್ನ**....ಭಗ್ನ; ಕಷ್ಟ
**ಬನ್ನದೞಿವು**....ಕಷ್ಟಗಳ ನಾಶ
**ಬದ್ಗರ್**....ಮರಣ
**ಬರ್ದಿದಿರ್**....ಬದುಕಿದಿರಿ (?)
**ಬಱಪೆ**....ವೃಥಾ; ಸುಮ್ಮನೆ
**ಬಲಂಗೊಂಡು**....ಸಹಾಯ ಹೊಂದಿ
**ಬಲವರುತಿರಲ್ಕೆ**....ಪ್ರದಕ್ಷಿಣಾಕಾರವಾಗಿ ಸುತ್ತುತ್ತಿರಲು
**ಬಲವೈರಿ**....ಇಂದ್ರ
**ಬವಣೆ**....ಭ್ರಮಣ

ಬವರ... ಯುದ್ಧ
ಬಸವಳ್ದುದು.... ಶಕ್ತಿಗುಂದಿ
ಬಹುಪದಾರ್ಥ.... ಅನೇಕ ಸಂದರ್ಭಗಳು (ಪದ+ಅರ್ಥ); ವ್ಯಾಪಾರದ ಸರಕುಗಳು
ಬಹುಶತಬಾಹುರಾಜಿ.... ಕಾರ್ತವೀರ್ಯ (ಸಹಸ್ರ ತೋಳುಗಳಿಂದ ರಂಜಿಸುವವನು)
ಬಳಿವಳಿ.... ಪಕ್ಕಪಕ್ಕದಲ್ಲಿ
ಬಾಗುಳ್ದಿರ್.... ವ್ಯಾಕುಲ; ಚಿಂತೆ
ಬಾಡಬ.... ಬ್ರಾಹ್ಮಣ
ಬಾಹುಜ.... ಕ್ಷತ್ರಿಯ
ಬಾಹುಜಸ್ತೋಮ.... ಕ್ಷತ್ರಿಯರು
ಬಾಹುಶಿಖರದಿ... ಕಲ್ಲಿನ ದಿಂಬಿನಂತಿರುವ ತೋಳಿನ ಮೇಲೆ
ಬಾಳೆ.... ಒಂದು ಜಾತಿಯ ಮೀನು
ಬಾಳ್ಕೆ.... ಬೆಳಕು
ಬಿಗುರ್ತೆಪ್ಪು.... ಹೆದರಿದೆಪ್ಪು
ಬಿಜ್ಜೆ... ವಿದ್ಯೆ
ಬಿಡುಸಿಲ್ದಂ ... ಸಡಿಲಿದ ಬಿಲ್ಲು
ಬಿತ್ತರಿಸಿ.... ವಿಸ್ತರಿಸಿ
ಬಿತ್ತು.... ಬೀಜ
ಬಿದಿ.... ವಿಧಿ
ಬಿದುಗಲ್.... ಚಂದ್ರಕಾಂತ ಶಿಲೆ
ಬಿಡೌಜ.... ಇಂದ್ರ
ಬಿಡುಗಂಡಿ.... ಹೆಚ್ಚು ನೀರು ಹೋಗಲು ಕಟ್ಟಿದ ತೂಬು
ಬಿನದ.... ವಿನೋದ
ಬಿನ್ನಣ.... ವಿಜ್ಞಾನ
ಬಿಸವಂದ.... ಆಶ್ಚರ್ಯ
ಬಿಸುಗದಿರ್.... ಸೂರ್ಯ
ಬಿಸುಸುಯ್ಲು.... ಬಿಸಿಯಾದ ಉಸಿರು
ಬಿಯುವ.... ವ್ಯಾಧ, ಬೇಡ
ಬುಧ.... ವಿದ್ವಾಂಸ; ಬುಧ ಎಂಬ ಗ್ರಹ
ಬೆಗದುಗೊಂದು.... ತಳವೆಳಗಾಗಿ
ಬೆದೆ.... ಕಾತರ
ಬೆದರ್ಚುವರ್–ಬೆದರಿಕೆ ತೋರಿಸುವರು
ಬೆಲ್ಲವತ್ತಂಗೆತ್ತು.... ಬಿಲ್ವಪತ್ರೆ ಎಂದು ಭ್ರಮಿಸಿ
ಬೆಸನ.... ವ್ಯಸನ; ವ್ಯಾಪಾರ
ಬೆಳ್ನೆಯ್.... ಬೆಣ್ಣೆ
ಬೇಗುದಿಗುದಿದು ...ಎಸರಿನಂತೆ ಕುದ್ದು
ಬೇರಿಗರು.... ವ್ಯಾಪಾರಮಾಡುವವರು
ಬಂತಿದೇರ.... ದಶರಥ
ಬಂದಣ.... ಬಂಧನ
ಬಂಧುರ.... ಮನೋಹರ
ಬೃಂಹಿತ.... ಆನೆಯ ಕೂಗು

## ಭ

ಭಗಣ.... ನಕ್ಷತ್ರಗಳ ಸಮೂಹ
ಭಗಣೇಶ... ಚಂದ್ರ
ಭವ.... ಈಶ್ವರ
ಭಾನು.... ಸೂರ್ಯ; ಕಾಂತಿ
ಭಾರತಿ.... ಮಾತು; ಸರಸ್ವತಿ
ಭೂಧರ.... ಆದಿಶೇಷ, ಕೈಲಾಸಪರ್ವತ, ಶ್ರೀರಾಮ
ಭೂಭೃತ್‌ಕುಲ.... ಬೆಟ್ಟಗಳ ಸಾಲು; ರಾಜರ ಸಮೂಹ
ಭೂಭೃದ್ವರ.... ರಾಜಶ್ರೇಷ್ಠ

ಭಾಸ್ವತ್....ಹೊಳೆಯುವ
ಭೀಮ....ಭಯಂಕರವಾದ
ಭೂಜ....ಮರ
ಭೂಜಾತೆ....ಸೀತೆ
ಭೂತಕುಲ....ಪ್ರಮಥ ಗಣಗಳು ; ಪಂಚಭೂತಗಳು
ಭೂತಪತಿ....ಜೀವಿಗಳ ಒಡೆಯ, ಭೂತಗಣಗಳ ಒಡೆಯ
ಭೇದಿಸು....ಬೇರೆ ಕಾವ್ಯಗಳಿಂದ ತೆಗೆದದ್ದಲ್ಲ ನನ್ನದೇ ಎಂದು ತೋರಿಸು ; ತೀರಿಸು
ಭೋಗ....ಹೆಡೆ, ಭೋಗಸುಖ
ಭಂಗ....ಅಲೆ ; ಕಷ್ಟ
ಭೃಗೂದ್ವಹ....ಪರಶುರಾಮ
ಭ್ರೂ....ಹುಬ್ಬು

## ಮ

ಮಕರ....ಮೊಸಳೆ
ಮಖ....ಯಜ್ಞ
ಮುಗುಡ....ಕಿರೀಟ
ಮಜ್ಜಿಹ್ವ....ನನ್ನ ನಾಲಿಗೆ
ಮಡುಹಿ....ಕೊಂದು
ಮಣಿ....ನಮಸ್ಕರಿಸು
ಮಣಿವಚ್ಚ....ರತ್ನದ ಆಭರಣ
ಮಥಿತಮಂ....ಕಡೆದದ್ದನ್ನು ; ಮಜ್ಜಿಗೆಯನ್ನು
ಮಥಿಸು....ಕಡೆ
ಮಧುಪ....ದುಂಬಿ
ಮಧ್ಯೆ....ನಡುವುಳ್ಳವಳು
ಮನೋಭವ....ಮನ್ಮಥ
ಮನ್ವಂತರ....೪೩೨೦೦೦೦ ಮಾನವ ವರ್ಷಗಳು
ಮನ್ಮಾತೆ....ನನ್ನ ತಾಯಿ
ಮನ್ನೆಯ....ಸೇನಾಪತಿ
ಮರುತ್‌ಸುತ....ಹನುಮಂತ
ಮರ್ಱೆಗೊಂಬುದು—ರಕ್ಷಣೆ ಪಡೆಯುವುದು
ಮಲಯಜ....ಗಂಧ
ಮಹಾಭೀಳ....ಹೆಚ್ಚು ಭಯಂಕರವಾದ
ಮಾರಹರ....ಮನ್ಮಥನನ್ನು ಕೊಂದವನು ; ಈಶ್ವರ
ಮಾಟ್ಕೆ....ಮಾಡಲಿ ; ರೀತಿ
ಮಾಂಜಲು....ಹೋಗಲು
ಮಿತ್ರ....ಸೂರ್ಯ
ಮಿತ್ರಸೂತಸುತಸೂದ್ಭವ....ಜಟಾಯು
ಮಿಸುಗು....ಹೊಳೆ, ಪ್ರಕಾಶಿಸು
ಮಿಳಿರ್ದ....ಚಲಿಸಿದ
ಮೃತ್ಯು....ಮೃತ್ಯು
ಮುಟ್ಟವಿಸಿ....ಮುಟ್ಟುವಂತೆ ಬಂದು
ಮುತ್ತಯ್ಯ....ಬ್ರಹ್ಮ
ಮುಪ್ಪುರಿ....ಮೂರು ಹುರಿ
ಮುನ್ಮೈಮಾಟ ಬೆಸುಗೆ....ಪೂರ್ವಜನ್ಮದಲ್ಲಿ ಮಾಡಿದ ಕರ್ಮ
ಮುಳಿ....ಕೋಪಿಸು
ಮೂರ್ಧಾಭಿಷೇಚನ....ಪಟ್ಟಾಭಿಷೇಕ
ಮೂರ್ವಟ್ಟಿ....ಮೂರು ವಂಶ
ಮೂಲ....ಕಾವ್ಯಕ್ಕೆ ಆಧಾರವಾದ ಕಥೆ ; ಬಂಡವಾಳ
ಮೂವಗಲ್....ಮೂರು ಹಗಲು ; ಮೂರು ದಿನ

**ಮಹಿ**....**ಭೂಮಿ**
**ಮಹೀಧ್ರ**....ಬೆಟ್ಟ
ಮಸಗೆ....ತಾಗಲು
ಮಸುಳ್ದ....ಮಂಕಾದ
ಮಾಗಧರು....ಹೊಗಳುಭಟರು
ಮಾಣ್ಬನೆ....ಬಿಡುವನೆ
ಮಾಧವ....ವಸಂತ; ವಿಷ್ಣು
ಮಾನಸೌಕಸ....ಹಂಸ
ಮಾನಿಪಂತೆ....ಗೌರವಿಸುವ ಹಾಗೆ
ಮಾರ್ತಂಡ....ಸೂರ್ಯ
**ಮೃಡ**....**ಈಶ್ವರ**
ಮೆಯ್‌ಗರೆವ....ಅಡಗುವ
ಮೇಖಲೆ....ಡಾಬು
ಮೇದಿನಿ....ಭೂಮಿ
ಮೇಲುದು....ಸೆರಗು
ಮೊಱಗೆ....ದನಿಮಾಡಲು
ಮೌಕ್ತಿಕ....ಮುತ್ತು
ಮೌನಿಸತ್ತಮ....ಋಷಿಶ್ರೇಷ್ಠ
ಮಂಜು....ಮನೋಹರ

# ಯ

**ಯತಿ**....ಛಂದಶ್ಶಾಸ್ತ್ರದ ಪಾರಿಭಾಷಿಕ ಪದ; ಮುನಿ
**ಯುತ**....**ಕೂಡಿದ, ಸಹಿತವಾದ**
ಯೋಗ್ಯಾಶ್ರಯ....ಯೋಗ್ಯಸ್ಥಾನ, ಯೋಗಿಗಳಿಗೆ ಆಶ್ರಯ

# ರ

ರಮಾ....ಹೆಂಗಸು
ರವಿರುಚಿ....ಸೂರ್ಯನ ಕಾಂತಿ
ರವ....ಶಬ್ದ
ರಯ....ವೇಗ; ರಮ್ಯ
ರಸ....ನೀರು
ರಸನ....ನಾಲಗೆ
ರಸಾಲ....ಮಾವು
ರಸೆ....ಭೂಮಿ
ರಾಗಮಣಿ....ಪದ್ಮರಾಗದ ಮಣಿ, ಕೆಂಪು ಮಣಿ
ರಾಗರಸ....ಸಂಗೀತದ ರಸ, ಮದಿರಾ ರಸ, ಗೈರಿಕಾದಿ ಧಾತುರಾಗಗಳ ರಸಗಳು; ಒಲವು
**ರಾಜ**....**ಚಂದ್ರ**
ರಾಜಮೌಳಿ....ರಾಜಶ್ರೇಷ್ಠ
ರಾಜನ್ಯನಿವಹ....ಕ್ಷತ್ರಿಯರ ಸಮೂಹ
ರಾಜರಾಜ....ಕುಬೇರ
ರಾಜವದನೆ....ಚಂದ್ರನಂತೆ ಮುಖ ಉಳ್ಳವಳು
ರಾಜಿ....ಸಮೂಹ
ರಾಜಿತ....ಪ್ರಕಾಶಿತ
ರಾಜೀವ....ಒಂದು ಬಗೆಯ ಮೀನು
ರುಚಿ....ಕಾಂತಿ
ರೇತೋಜಾತಕೀಟ....ರೇತಸ್ಸಿನಿಂದ ಹುಟ್ಟಿದ ಹುಳು
ರಂಗ....ಕುಣಿತ
ರಿಂಗಣಗುಣಿದು....ಕುಣಿದು ಕುಪ್ಪಳಿಸಿ

## ಲ

ಲಾವಣ್ಯ....ಲವಣಸಂಬಂಧವಾದ ನೀರು ; ಸಮುದಾಯಶೋಭೆ
ಲಾವಣ್ಯಲೀಲೆ....ಉಪ್ಪಿನ ಆಟ

## ವ

ವಜ್ರಿ....ಇಂದ್ರ
ವನವನಜವನಚರರ....ಕಾಡುಗಳನ್ನೂ, ಮರಗಿಡಗಳನ್ನೂ, ಮೃಗಪಕ್ಷಿಗಳನ್ನೂ
ವಲಂ....ನಿಶ್ಚಯ
ವಸುಮತಿ....ಭೂಮಿ
ವಹ್ನಿ....ಬೆಂಕಿ
ವಳಕ್ಷ....ಬಿಳುಪಾದ ; ಶುದ್ಧವಾದ
ವಾರ್ಧಿ....ಸಮುದ್ರ
ವಾಮನ....ಕುಳ್ಳ
ವಾಮಾಂಕ....ಎಡತೊಡೆ
ವಾರ....ಸಮೂಹ
ವಾರನಾರಿ....ಸೂಳೆ
ವಾರಾಶಿ....ಸಮುದ್ರ
ವಾರಾಶಿರಾಜ....ವರುಣ
ವಾರಿಜೋದ್ಭವ....ಬ್ರಹ್ಮ
ವಾರಿಧಿ....ಸಮುದ್ರ
ವಾಸವ....ಇಂದ್ರ
ವಾಹಿನೀನಿಕರ....ಸೇನಾಸಮೂಹ ; ನದಿಗಳ ಗುಂಪು
ವಿಕ್ರಮಿ....ಶೂರ
ವಿಗತ....ಹೋಗಲಾಡಿಸಿದ
ವಿತತ....ವಿಸ್ತಾರವಾದ ; ಪ್ರಸಿದ್ಧವಾದ
ವಿತಾನ....ಸಾಲು
ವಿದಗ್ಧ....ಪ್ರೌಢೆ
ವಿದ್ವೇಷಕ....ವೈರಿ
ವಿದ್ರುಮ....ಹವಳ
ವಿದೂಷಕ....ಹಾಸ್ಯಗಾರ
ವಿಧುಪುರ....ಉಡುಪಿಕ್ಷೇತ್ರ
ವಿನತ....ನಮಸ್ಕರಿಸಿದ ; ವಿನತಾದೇವಿ
ವಿನಮಿತರು....ಬಾಗಿದವರು
ವಿನಾಯಕ....ಗಣಪತಿ ; ಗರುಡ
ವಿಪಕ್ಷತ್ರಿಪುರವೈರಿ....ಈಶ್ವರ
ವಿಪಿನ....ಕಾಡು
ವಿಬುಧ....ವಿದ್ವಾಂಸ
ವಿಬುಧೇಂದ್ರ....ದೇವೇಂದ್ರ
ವಿಭಾಕರ....ಸೂರ್ಯ
ವಿಭಾವಸು....ಸೂರ್ಯ ; ಅಗ್ನಿ
ವಿರಾಜತ್....ಪ್ರಕಾಶಮಾನವಾದ
ವಿಷ....ಕೇಡು ; ನೀರು
ವಿಷಯ....ಇಂದ್ರಿಯ
ವಿಹಂಗ....ಹಕ್ಕಿ
ವೃಕ....ಭಸ್ಮಾಸುರ
ವೃದ್ಧಿ....ಕಥೆಯನ್ನು ಬೆಳೆಸಲು ಸೇರಿಸಿದ ಭಾಗ ; ಬಡ್ಡಿ
ವೃಷ....ಪಾಪ ; ವೃಷಭ
ವೆಗ್ಗಳಿಸಿ....ರೇಗಿ
ವೇಪಚೋರ....ಸೋಮಕನೆಂಬ ರಾಕ್ಷಸ
ವೇಣಿ....ಜಡೆ
ವಂಶ....ಬೆನ್ನುಮೂಳೆ, ಬಿದಿರುಮೆಳೆ, ಕುಲ
ವಾಂಛಿತ....ಅಭಿಲಾಷೆ

## ಶ

ಶಕುಲ....ಸೀಗಡಿ, ಕೊಚ್ಚಲಿ ಮುಂತಾದ ಚಿಕ್ಕ ಮೀನುಗಳು
ಶಕ್ರ....ಇಂದ್ರ
ಶತಪತ್ರ....ಕಮಲ
ಶರ....ನೀರು
ಶಿವ....ಮಂಗಳ; ಈಶ್ವರ
ಶೀತಾಂಶು....ಚಂದ್ರ
ಶುಕ್ತಿ....ಚಿಪ್ಪು
ಶುಕ್ಲಧ್ವಜ....ಬಿಳಿಯ ಬಾವುಟ
ಶ್ರೀಶಂಕರಂ....ಶ್ರೀ ಶಂಕರನು, (ಶ್ರೀಶಂ+ಕರಂ) ಲಕ್ಷ್ಮೀಪತಿಯಾದ ವಿಷ್ಣುವು; ಹೆಚ್ಚಾಗಿ
ಶ್ರೇಯ....ಒಳ್ಳೆಯದು

## ಷ

ಷಟ್ಪದ....ದುಂಬಿ; ವಾರ್ಧಕಷಟ್ಪದಿ

## ಸ

ಸಕ್ಕದ....ಸಂಸ್ಕೃತ
ಸಟೆ....ಸುಳ್ಳು
ಸಡ್ಡೈಸಲು....?
ಸತ್ತ್ವ....ಪ್ರಾಣಿ; ಬಲ
ಸದ್ಮ....ಮನೆ; ನಿಲಯ
ಸದಾರಾಮ (ಸತ್+ಆರಾಮ).... ಒಳ್ಳೆಯವರಿಗೆ ಆಶ್ರಯಸ್ಥಾನನಾದ
ಸನ್ನೆಯ....ಸನ್ನಾಹ
ಸಮನಿಸಿತು....ಉಂಟಾಯಿತು
ಸಮಂತು....ಚೆನ್ನಾಗಿ
ಸಮಾಕಲಿತ....ಕೂಡಿದ
ಸಮಾಶುಗ....ವೇಗವಾಗಿ ಹೋಗುವುದರಿಂದ ಕೂಡಿದ್ದು
ಸಮೀರ....ವಾಯು
ಸಸಿ....(ಶಶಿ) ಚಂದ್ರ
ಸಹಕಾರ....ಮಾವಿನ ಮರ
ಸಹಜರ್....ಒಡಹುಟ್ಟಿದವರು
ಸರಿದ್ವರ....ವರುಣ
ಸುರಾಗಮ....ಪ್ರೀತಿಯಿಂದಿರುವ ಲಕ್ಷ್ಮಿಯೊಡನೆ ಕೂಡಿದ ವಿಷ್ಣು; ದೇವದಾರು ಮರಗಳು; ದೇವತೆಗಳ ಬರುವಿಕೆ
ಸುವರ್ಣಪಕ್ಷ....ಚಿನ್ನದ ಗರಿ
ಸುಹೃತ್‌ಸುಹೃದರ್....ಒಳ್ಳೆಯ ಮನಸ್ಸಿಂಬ ಸ್ನೇಹಿತರು
ಸೂಡಿ....ಮುಡಿದು
ಸೂಸಕ....ಮುಂಗುರುಳಿನ ಆಭರಣ
ಸೂೞ್ಱಿತು....ಕ್ರಮವಾಗಿ
ಸೂೞ್ಪಿರುಗುತೆ....ಬಾರಿಬಾರಿಗೆ ಸುತ್ತುತ್ತ
ಸೂೞ್ತೈಪ....ದನಿಮಾಡುವ
ಸೆಪೆದ....ಹಿಂದೆ ನಿಂತ
ಸೆರೆಗೊೞಲ್....ಸೆರೆಬಿಗಿದ ಕೊರಳು
ಸೈಪಿಡಿದು....ಚೆನ್ನಾಗಿ ಹಿಡಿದು
ಸೈಪು....ಪುಣ್ಯ
ಸೈಮಿನಿ....ಸಂಯಮಿನಿ, ನರಕ
ಸೈಯ್ಯಡಿ....ಋಜುವಾದ; ಸೌಮ್ಯವಾದ ಪಾದ

ಸರಸಿಜಭವಾಂಡ....ಬ್ರಹ್ಮಾಂಡ
ಸಲ್ಲಲಿತ....ಮನೋಹರ
ಸವನಿಸಿ....ಹೊಂದಿಸಿ
ಸಾರುತ....ಸಮೀಪಿಸುತ್ತ
ಸಾಲ....ಸಾಲವೃಕ್ಷ
ಸಾಸ....ಸಾಹಸ
ಸಿರಿಬಲ್ಲಹ....ಶ್ರೀವಲ್ಲಭ; ರಾಮ
ಸೀಮಂತಿನಿ....ಸ್ತ್ರೀ
ಸುಕೃತ....ಚೆನ್ನಾಗಿ ಮಾಡಿದ; ಪುಣ್ಯ
ಸುಟ್ಟುವೆರಲು....ತರ್ಜನಿ ಎಂಬ ಬೆಟ್ಟು; ತೋರುಬೆರಳು
ಸುತಿ....ಶ್ರುತಿ
ಸುನಯನೆ....ಮನೋಹರವಾದ ಕಣ್ಣುಳ್ಳವಳು; ಸುಲಭವಾಗಿ ಅನ್ವಯಿಸಲ್ಪಡುವ ಕಾವ್ಯವೆಂಬ ಕನ್ನಿಕೆ
ಸುಪುನ್ನಾಗ....ಒಳ್ಳೆಯ ಪುನ್ನಾಗ ಎಂಬ ಹೆಸರಿನ ನಾಗ, ಒಳ್ಳೆಯ ಆನೆ, ಗಂಡು ಆನೆ
ಸುಮುಕುಳ....ಒಳ್ಳೆಯ ಮೊಗ್ಗು
ಸುರದನೆ—ಒಳ್ಳೆಯ ಹಲ್ಲುಳ್ಳವಳೆ; ಸುದತಿ
ಸುರಪ....ಇಂದ್ರ
ಸೈವಱಿದುದು....ನೇರವಾಗಿ ಹರಿದುದು
ಸೋಗೆಗಣ್ಣಬಲೆ....ತುದಿಗೆ ಕಪ್ಪು ಹಚ್ಚಿಕೊಂಡಿರುವ ಕಣ್ಣುಳ್ಳ ಹೆಣ್ಣು; ನವಿಲುಗರಿಯ ಕಣ್ಣುಳ್ಳವಳು
ಸೋಮ....ಉಮೆಯೊಡನೆ ಕೂಡಿರುವ ಶಿವ, ಚಂದ್ರ
ಸೋಮ....ಚಂದ್ರ
ಸೋಮಪುರ....ಉಡುಪಿ
ಸ್ತೋಮ....ಗುಂಪು
ಸೌರಿಪುತ್ರಿ....ಸ್ವಯಂಪ್ರಭೆ
ಸೌಸವ....ವಾಸನೆ
ಸಂಕ....ಶಂಖ
ಸಂಕುಲ....ಗುಂಪು
ಸಂಗರ....ಯುದ್ಧ
ಸಂದೆಗಂಬಡೆ....ಅನುಮಾನಪಡಲು
ಸಂದೋಹ....ಗುಂಪು
ಸಂಧಿ....ಅಂಗಗಳ ಸಂಧಿ; ಪದಗಳ ಸಂಧಿ
ಸಂಭಾವಿಸು....ಗೌರವಿಸು
ಸಂಭಾವ್ಯ....ಸ್ತೋತ್ರಾರ್ಹ
ಸಂವರ್ತಜಂಝಾವಾತ....ಪ್ರಳಯಕಾಲದ ಬಿರುಗಾಳಿ
ಸ್ರಜ....ಹಾರ

## ಹ

ಹರಿ....ಇಂದ್ರ, ವಿಷ್ಣು, ಸೂರ್ಯ, ಹಂಸ, ಕುದುರೆ, ಸರ್ಪ, ಸಿಂಹ
ಹರಿಪುತ್ರ....ರಾಹು, ಕೇತು
ಹರಿವಾಹನ....ಮಂಗಳ ಗ್ರಹ
ಹರಿಸುತ....ಕೇಸರಿಯೆಂಬ ವಾನರನ ಮಗನಾದ ಹನುಮಂತ; ಸೂರ್ಯನ ಮಕ್ಕಳಾದ ಶನಿ ಮುಂತಾದ ಗ್ರಹಗಳು
ಹರ್ಮ್ಯಾಗ್ರ....ಉಪ್ಪರಿಗೆಯ ತುದಿ
ಹಿಮಕರ....ಚಂದ್ರ
ಹುತಾಶನ....ಅಗ್ನಿ
ಹೂಣೆಯ....ಹೊಟ್ಟೆಯ ಕಿಚ್ಚು
ಹೇಮಾಕ್ಷ....ಹಿರಣ್ಯಾಕ್ಷ
ಹೈಮಕಟಕ....ಚಿನ್ನದಂತಹ ಕಟ್ಟು; ಹಿಮಮಯವಾದ ತಪ್ಪಲು; ಚಿನ್ನದಕಡಗ
ಹಸುಗೆ....ಹಂಚಿಕೆ
ಹಂತಿ....ಪಂಕ್ತಿ; ಸಾಲು

# ತಪ್ಪೋಲೆ

| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| ೨ | ೭ | ನಮುಚಿತದೆ | ಸಮುಚಿತದೆ |
| ,, | ,, | ಮಣಿವೆನೆಂದು | ಮಣಿವೆನೆಂದುಂ |
| ೮ | ,, | ಶಶಿಧರಾನನೆ | ಶಸಧರಾನನೆ |
| ,, | ,, | ಸುಶೇಣ | ಸುಷೇಣ |
| ೧೦ | ೧೩ | ಪ್ರಾಕಾರಮುನೆ | ಪ್ರಾಕಾರಮೆನೆ |
| ೧೨ | ೨೩ | ಬೆಳ್ನೊರೆಯೋ | ಬೆಳ್ನೊರೆಯೆ |
| ೧೫ | ೩೨ | ಬಳಿಕೆನ್ನೊಳು | ಬೞಿಕೆನ್ನೊಳು |
| ,, | ,, | ನೆರೆ | ನೆಱೆ |
| ೧೭ | ೪೩ | ನೋಂಪಿನ | ನೋಂಪಿಯ |
| ೨೦ | ೫೪ | ತಮ್ಮನೊಳಕಟಂ | ತಮ್ಮನೊಳಕಟ |
| ,, | ೫೫ | ತನುವರ್ಪಿಸುವೆ | ತನುವನರ್ಪಿಸುವೆ |
| ,, | ,, | ಬಿಲಿ | ಬಲಿ |
| ೨೫ | ೯ | ನಿಟ್ಟವನ | ನಿಟ್ಟವನ |
| ೨೯ | ೨೫ | ಬಾನ್ದಟಂ | ಬಾಳ್ದಿಟಂ |
| ೩೧ | ೩೪ | ಪರ್ವಿ | ಪರ್ವೆ |
| ೩೭ | ೫೮ | ಮೆಲ್ಲೆಲ್ಲರ | ಮೆಲ್ಲೆಲರ |
| ೪೦ | ೨ | ಪಡೆಪ | ಪಡೆದೆ |
| ,, | ,, | ಮುಗುೞ್ಕಿದನ್ನ | ಮುಗುೞ್ಕಿದನ್ನ |
| ೪೧ | ೫ | ಕೊರೆಗೆ | ಕೊರಗೆ |
| ,, | ೭ | ಕಿರಣವಿರುಚಿ | ಕಿರಣರವಿರುಚಿ |
| ೪೨ | ೧೦ | ಕಂಡುಪುವೆ | ಕಂಡಪುವೆ |
| ೪೩ | ೧೪ | ಮೂಳ್ಪುಮ | ಮೂೞ್ಪುಮ |
| ೪೪ | ೧೬ | ದೀಡಿೞಿದ | ದೀಡಿರಿದ |
| ,, | ೧೮ | ಪರೆಕೆ | ಪರಕೆ |
| ,, | ೧೯ | ಪುರ್ಪುಗಳ | ಪುರ್ಪುಗಳ |
| ೪೬ | ೨೪ | ಕಾಣ್ಪದಣುಗ | ಕಾಣ್ಪುದಣುಗ |

| | | | |
|---|---|---|---|
| ೪೬ | ೩೬ | ಕೊರ್ಮೆ | ಕೂರ್ಮೆ |
| ,, | ,, | ನೆನ್ನೆಗಂ | ನ್ನೆನ್ನೆಗಂ |
| ೪೭ | ೩೮ | ಪಜ್ಜೆ | ಪೆಜ್ಜೆ |
| ,, | ೪೦ | ಕಡೆವಗಲೊಲಣೆಗೈ | ಕಡೆವಗಲೊಳಣೆಗೈ |
| ,, | ೪೧ | ಸೊಗಸುಂ | ಸೊಗಸಂ |
| ,, | ,, | ಅರಿಗೇಲ್ಕಬಲ್ಪಿ | ಅರಿಗಿೀಲ್ಕಬಲ್ಪಿ |
| ೪೮ | ೪೪ | ಕರೆದುಪುದೆನಲ್ | ಕರೆದಪುದೆನಲ್ |
| ೫೧ | ೪೪ | ಮಹೋತ್ಸವವಿರದೆ | ಮಹೋತ್ಸವವನಿರದೆ |
| ೫೨ | ೫೧ | ಮಡಿವಚ್ಚ | ಮಣಿವಚ್ಚ |
| ೫೫ | ೬೦ | ಭೂ | ಭ್ರೂ |
| ,, | ೬೪ | ದಿಗ್ವಿಜವರರ್ | ದ್ವಿಜವರರ್ |
| ೫೬ | ೬೫ | ಶರಣಾಗ ತನುಭೂರಿಲೀಲ | ಶರಣಾಗತನುಭೂರಿಲೀಲ |
| ೫೭ | ೭೧ | ಕುಂಭೀರವರ್ | ಕುಂಭೀನಸರ್ |
| ೫೯ | ೭೬ | ಬಹುಶತ | ಬಹುಶತಕ |
| ,, | ,, | ತುಗುರ್ವಿಸಿದ | ತಗುರ್ವಿಸಿದ |
| ೬೦ | ೮೩ | ಬಾಗುಬ್ಬಿಕೊಳಬ್ಬ | ಬಾಗುಳೊಳಬ್ಬ |
| ,, | ೮೪ | ಸಾಕು | ಸಾಕು ಸಾಕು |

ಉಷಾ ಪ್ರೆಸ್, ಮೈಸೂರು

ಇದೇ ಲೇ